62

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 311 |
| ಸದಸ್ಯರ ಹೆಸರು | ಶ್ರೀ ರಾಮಸ್ವಾಮಿ. ಎ. ಟಿ. (ಅರಕಲಗೂಡು) |
| ಉತ್ತರಿಸಬೇಕಾದ ದಿನಾಂಕ | 27.12.2022 |

| ಕ್ರ ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ | 2022ನೇ ಸಾಲಿನಲ್ಲಿ ಬಿದ್ದ ಭಾರಿ ಗ್ರಾಮೀಣಾಭಿವೃದ್ಧಿ, ಇತರೆ ರಸ್ತೆಗಳು ಮತ್ತು ಕೆರೆಕಟ್ಟೆಗಳು ತುಂಬಾ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ ಅವುಗಳನ್ನು ದುರಸ್ತಿಪಡಿಸಲು ಅರಕಲಗೂಡು ಕ್ಷೇತ್ರಕ್ಕೆ ಬಿಡುಗಡೆಗೊಳಿಸಿದ ಅನುದಾನವೆಷ್ಟು; | ಹಾನಿಗೊಳಗಾದ ಈ ಗ್ರಾಮೀಣ ರಸ್ತೆಗಳ ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲು ರೂ.269.85 ಲಕ್ಷಗಳ ಮತ್ತು ಕೆರೆಕಟ್ಟೆಗಳ ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲು ರೂ.4.26 ಲಕ್ಷಗಳ ಅನುದಾನ ಹಂಚಿಕೆ ಮಾಡಲಾಗಿದೆ. |
| ಇ | ಅನುದಾನ ಬಿಡುಗಡೆ ಮಾಡದಿದ್ದರೆ ಯಾವ ಕಾಲಮಿತಿಯಲ್ಲಿ ಅನುದಾನ ಬಿಡುಗಡೆ ಮಾಡಿ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು ? | ಈ ಕಾಮಗಾರಿಗಳ ಪ್ರಗತಿಗನುಸಾರವಾಗಿ ಜಿಲ್ಲಾ ಪಂಚಾಯತ್‌ನ ಕೋರಿಕೆಯಂತೆ ಅನುದಾನ ಬಿಡುಗಡೆಗೆ ಕ್ರಮವಹಿಸಲಾಗುವುದು. |

ಸಂ.ಗ್ರಾಅಪ/14ನೇ ಅ/ಚು.ರ.ಪ್ರ-311/2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ 14ನೇ ಅಧಿವೇಶನ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 378

ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್ (ನರಸಿಂಹರಾಜ)

ಉತ್ತರಿಸುವ ದಿನಾಂಕ : 27-12-2022

ಉತ್ತರಿಸುವವರು : ಸನ್ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕಾಡಂಚಿನ ಜಿಲ್ಲೆಗಳಲ್ಲಿ ಕಾಡಾನೆಗಳ ದಾಳಿಯಿಂದ ಅಪಾರ ಸಾವು ನೋವು ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| (ಆ) | ಬಂದಿದ್ದಲ್ಲಿ ಇಲ್ಲಿಯವರೆಗೆ ಆಗಿರುವ ಸಾವು ನೋವಿನ ವಿವರವನ್ನು ನೀಡುವುದು; | ರಾಜ್ಯದಲ್ಲಿ ಕಳೆದ 03 ವರ್ಷಗಳಲ್ಲಿ ಕಾಡಾನೆ ದಾಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ ಪ್ರಕರಣಗಳ ವಿವರ.<br><br>ಕ್ರ.ಸಂ / ವರ್ಷ / ಪ್ರಕರಣಗಳ ಸಂಖ್ಯೆ<br>1 / 2019-20 / 29<br>2 / 2020-21 / 23<br>3 / 2021-22 / 22<br><br>ರಾಜ್ಯದಲ್ಲಿ ಕಳೆದ 03 ವರ್ಷಗಳಲ್ಲಿ ಕಾಡಾನೆ ಒಳಗೊಂಡಂತೆ ವನ್ಯಪ್ರಾಣಿ ದಾಳಿಯಿಂದ ಉಂಟಾದ ಮಾನವ ಗಾಯ ಪ್ರಕರಣಗಳ ವಿವರ.<br><br>ಕ್ರ.ಸಂ / ವರ್ಷ / ಪ್ರಕರಣಗಳ ಸಂಖ್ಯೆ<br>1 / 2019-20 / 43<br>2 / 2020-21 / 37<br>3 / 2021-22 / 40 |
| (ಇ) | ಸಾವನಪ್ಪಿರುವ ಎಷ್ಟು ಮಂದಿಯ ಕುಟುಂಬ ವರ್ಗಕ್ಕೆ ಸರ್ಕಾರದಿಂದ ಎಷ್ಟು ಪರಿಹಾರ ನೀಡಲಾಗುತ್ತಿದೆ; ಇಲ್ಲಿಯವರೆಗೆ ಎಷ್ಟು ಮಂದಿಗೆ ಪರಿಹಾರ ನೀಡಲಾಗಿದೆ; (ಜಿಲ್ಲಾವಾರು ವಿವರವನ್ನು ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಅಪಜೀ 66 ಎಫ್‌ಡಬ್ಲ್ಯೂಎಲ್ 2019, ದಿನಾಂಕ: 07-01-2020 ರಲ್ಲಿ ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಮಾನವ ಪ್ರಾಣ ಹಾನಿ ಪ್ರಕರಣಗಳಿಗೆ ನಿಗಧಿಪಡಿಸಿದಂತೆ ದಯಾತ್ಮಕ ಧನ ರೂ.7.50 ಲಕ್ಷಗಳನ್ನು ಪಾವತಿಸಲಾಗುತ್ತಿದೆ. ಅಲ್ಲದೇ ಸರ್ಕಾರದ ಆದೇಶ ಸಂಖ್ಯೆ. ಅಪಜೀ- 61-ಎಫ್‌ಎಪಿ-2018 ದಿನಾಂಕ: 16-10-2018 ರಂತೆ ಮೃತರ ಕುಟುಂಬದ ವಾರಸುದಾರರಿಗೆ 05 ವರ್ಷಗಳವರೆಗೆ ಪ್ರತಿ ತಿಂಗಳಿಗೆ ರೂ. 2,000/-ಗಳ ಮಾಸಾಶನವನ್ನು ಪಾವತಿಸಲಾಗುತ್ತಿದೆ.<br><br>ಕಾಡಾನೆ ದಾಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ ಪ್ರಕರಣಗಳಿಗೆ ಪಾವತಿಸಲಾದ ದಯಾತ್ಮಕ ಧನದ ಜಿಲ್ಲಾವಾರು ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ. |

| | | |
|---|---|---|
| | | ಪ್ರಸ್ತುತ ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಮಾನವ ಪ್ರಾಣ ಹಾನಿ, ಶಾಶ್ವತ ಅಂಗವಿಕಲತೆ, ಭಾಗಶಃ ಶಾಶ್ವತ ಅಂಗವಿಕಲತೆ, ಗಾಯಗೊಂಡವರಿಗೆ, ಆಸ್ತಿ ಪಾಸ್ತಿ ನಷ್ಟ ಪ್ರಕರಣಗಳಿಗೆ ಈ ಹಿಂದೆ ನೀಡಲಾಗುತ್ತಿದ್ದ ಪರಿಹಾರ ಮೊತ್ತವನ್ನು ಸರ್ಕಾರದ ಆದೇಶ ಸಂಖ್ಯೆ: ಅಪಜೀ 114 ಎಫ್ ಡಬ್ಲ್ಯೂಎಲ್ 2022, ದಿನಾಂಕ:15-12-2022 ಮತ್ತು ತಿದ್ದುಪಡಿ ಆದೇಶ ದಿನಾಂಕ: 16-12-2022 ರನ್ವಯ ಪರಿಷ್ಕರಿಸಿ ಹೆಚ್ಚಿಸಲಾಗಿದೆ. |
| (ಈ) | ಕಾಡಾನೆಗಳ ಹಾವಳಿಯನ್ನು ತಡೆಗಟ್ಟಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | **ಕಾಡಾನೆ ಹಾವಳಿ ನಿಯಂತ್ರಿಸಲು ಕೈಗೊಂಡ ಕ್ರಮಗಳ ವಿವರ:**<br>**1.** ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನಗೊಳಿಸಿ ವನ್ಯಪ್ರಾಣಿಗಳ ಆವಾಸ ಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ತಡೆಯಲಾಗುತ್ತಿದೆ.<br>**2.** ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ/ನಿರ್ವಹಣೆ, ಆನೆತಡೆ ಕಂದಕ ನಿರ್ಮಾಣ/ನಿರ್ವಹಣೆ ಮಾಡಲಾಗಿದ್ದು ಮತ್ತು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>**3.** ಹಿಮ್ಮೆಟ್ಟಿಸುವ ತಂಡ (ADC) ಹಾಗೂ ಕ್ಷಿಪ್ರ ಸ್ಪಂದನ ತಂಡ (RRT) ಗಳನ್ನು ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ Wireless networking ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>**4.** ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಕಂಟ್ರೋಲ್ ರೂಮ್ ಗಳನ್ನು ಸ್ಥಾಪಿಸಲಾಗಿದೆ.<br>**5.** ಕಾಡಾನೆ ಗುಂಪಿನಲ್ಲಿದ್ದ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನ-ವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವ ಗಾಯ ತಪ್ಪಿಸಲು ಕ್ರಮ ವಹಿಸಲಾಗುತ್ತಿದೆ.<br>6. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗ್ಗಿಂದಾಗ್ಗೆ ಸೂಕ್ತ ಆವಾಸಸ್ಥಾನ/ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ.<br>ಪ್ರಸ್ತುತ ಸರ್ಕಾರದ ಆದೇಶ ಸಂಖ್ಯೆ: ಅಪಜೀ 170 ಎಫ್ ಡಬ್ಲ್ಯೂಎಲ್ 2022, ದಿನಾಂಕ:21.11.2022ರಲ್ಲಿ ಹಾಸನ, ಚಿಕ್ಕಮಗಳೂರು, ಮೈಸೂರು ಮತ್ತು ಕೊಡಗು ಜಿಲ್ಲೆಗಳ ಕಾಡಾನೆ ಹಾವಳಿ ಹೆಚ್ಚಾಗಿರುವ ಭಾಗಗಳಲ್ಲಿ ಕಾಡಾನೆ |
| (ಉ) | ಇಲ್ಲದಿದ್ದಲ್ಲಿ, ಕಾರಣ ನೀಡುವುದು | |

| | | |
|---|---|---|
| | | ಹಾವಳಿಯನ್ನು ತಡೆಗಟ್ಟಲು ಪ್ರತಿ ಜಿಲ್ಲೆಗೊಂದರಂತೆ ಅಧಿಕಾರಿ / ಸಿಬ್ಬಂದಿಗಳನ್ನೊಳಗೊಂಡ ಆನೆ ಕಾರ್ಯಪಡೆ (Elephant Task Force) ಯನ್ನು ಹಾಸನ ಜಿಲ್ಲೆಯ ಸಕಲೇಶಪುರ ಕೇಂದ್ರ ಸ್ಥಾನದಲ್ಲಿ, ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ಕೇಂದ್ರ ಸ್ಥಾನದಲ್ಲಿ, ಮೈಸೂರು ಜಿಲ್ಲೆಯ ಹುಣಸೂರು ಕೇಂದ್ರ ಸ್ಥಾನದಲ್ಲಿ ಮತ್ತು ಕೊಡಗು ಜಿಲ್ಲೆಯ ಮಡಿಕೇರಿ ಕೇಂದ್ರ ಸ್ಥಾನದಲ್ಲಿ ರಚಿಸಲಾಗಿರುತ್ತದೆ. ಅದರನ್ವಯ ಆನೆ ಕಾರ್ಯಪಡೆ ರಚನೆಯಾಗಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿದೆ. |

**ಸಂಖ್ಯೆ: ಅಪಜೀ 185 ಎಫ್‌ಡಬ್ಲ್ಯೂಎಲ್ 2022**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ಅನುಬಂಧ-4

## ಕಾಡಾನೆ ದಾಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ ಪ್ರಕರಣಗಳಿಗೆ ಪಾವತಿಸಲಾದ ದಯಾತ್ಮಕ ಧನದ ಜಿಲ್ಲಾವಾರು ವಿವರ.

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ಜಿಲ್ಲೆ / ವಿಭಾಗ | 2019-20 | | 2020-21 | | 2021-22 | |
|---|---|---|---|---|---|---|---|
| | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 1 | ಮೈಸೂರು | 1 | 5.00 | - | - | - | - |
| 2 | ಕಾವೇರಿ | 1 | 5.00 | 1 | 7.50 | - | - |
| 3 | ಹಾಸನ | 3 | 15.00 | 5 | 37.50 | 5 | 37.50 |
| 4 | ಮಲೆಮಹದೇಶ್ವರ | 4 | 20.00 | 1 | 7.50 | 1 | 7.50 |
| 5 | ಬಂಡೀಪುರ | 3 | 15.00 | 2 | 15.00 | - | - |
| 6 | ರಾಮನಗರ | 2 | 10.00 | - | - | - | - |
| 7 | ಚಿಕ್ಕಮಗಳೂರು | 2 | 10.00 | - | - | 2 | 15.00 |
| 8 | ವಿರಾಜಪೇಟೆ | 1 | 5.00 | 3 | 22.50 | 2 | 15.00 |
| 9 | ಬೆಂಗಳೂರು ಗ್ರಾಮಾಂತರ | 1 | 5.00 | - | - | - | - |
| 10 | ಮಡಿಕೇರಿ | 3 | 15.00 | 4 | 30.00 | 5 | 37.50 |
| 11 | ಬಿಳಿಗಿರಿರಂಗನಬೆಟ್ಟ | 1 | 5.00 | 2 | 15.00 | - | - |
| 12 | ಮಡಿಕೇರಿ ವಜೀ | 1 | 5.00 | - | - | - | - |
| 13 | ಕೋಲಾರ | 3 | 22.50 | 3 | 22.50 | 2 | 15.00 |
| 14 | ಬನ್ನೇರುಘಟ್ಟ | 1 | 7.50 | 1 | 7.50 | 2 | 15.00 |
| 15 | ತುಮಕೂರು | 1 | 7.50 | - | - | - | - |
| 16 | ಮೈಸೂರು | 1 | 7.50 | 1 | 7.50 | - | - |
| 17 | ನಾಗರಹೊಳೆ | - | - | - | - | 3 | 22.50 |
| | **ಒಟ್ಟು** | **29** | **160.00** | **23** | **172.50** | **22** | **165.00** |

ಸರ್ಕಾರದ ಆದೇಶ ಸಂಖ್ಯೆ: ಅಪಜೀ-143-ಎಫ್‌ಡಬ್ಲ್ಯುಎಲ್-2010, ದಿನಾಂಕ: 03/08/2011ರ ಪ್ರಕಾರ ವನ್ಯಪ್ರಾಣಿ ದಾಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ ಪ್ರಕರಣಗಳಿಗೆ ರೂ.5.00 ಲಕ್ಷಗಳನ್ನು ಹಾಗೂ ಸರ್ಕಾರದ ಆದೇಶ ಸಂಖ್ಯೆ: ಅಪಜೀ-66-ಎಫ್‌ಡಬ್ಲ್ಯುಎಲ್-2019, ದಿನಾಂಕ: 7/1/2020 ರಿಂದ ಅನ್ವಯವಾಗುವಂತೆ ರೂ.7.50 ಲಕ್ಷಗಳ ದಯಾತ್ಮಕ ಧನವನ್ನು ಪಾವತಿಸಲಾಗಿದೆ.

20/12/22

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,
(ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು,
ಕರ್ನಾಟಕ, ಬೆಂಗಳೂರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ರವಿಸುಬ್ರಹ್ಮಣ್ಯ ಎಲ್.ಎ. (ಬಸವನಗುಡಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 415 |
| ಉತ್ತರಿಸಬೇಕಾದ ದಿನಾಂಕ | : | 27-12-2022 |
| ಉತ್ತರಿಸುವ ಸಚಿವರು | : | ಮುಖ್ಯಮಂತ್ರಿಯವರು |

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ವೃಂದದ ಎಷ್ಟು ಹುದ್ದೆಗಳು ಮಂಜೂರಾಗಿವೆ; (ಸಂಬಂಧಪಟ್ಟ ಆದೇಶದ ಪ್ರತಿ ಒದಗಿಸುವುದು) | ಕರ್ನಾಟಕ ಸರ್ಕಾರ ಸಚಿವಾಲಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಲ್ಲಿ ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ವೃಂದದ 02 ಮಂಜೂರಾದ ಹುದ್ದೆಗಳು ಇರುತ್ತವೆ.<br><br>(ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳು, 2019ರ ಪ್ರತಿಯನ್ನು **<u>ಅನುಬಂಧದ</u>**ಲ್ಲಿ ಒದಗಿಸಿದೆ) |
| ಆ) | ಪ್ರಸ್ತುತ ಈ ವೃಂದದಲ್ಲಿ ಎಷ್ಟು ಹುದ್ದೆಗಳು ಖಾಲಿ ಇವೆ; ಈ ಹುದ್ದೆಗಳಿಗೆ ಎಷ್ಟು ಅಧಿಕಾರಿಗಳು ಮುಂಬಡ್ತಿಗೆ ಅರ್ಹತೆ ಹೊಂದಿರುತ್ತಾರೆ; (ಸಂಪೂರ್ಣ ಮಾಹಿತಿ ನೀಡುವುದು) | ಪ್ರಸ್ತುತ ಈ ವೃಂದದಲ್ಲಿ 02 ಹುದ್ದೆಗಳು ಖಾಲಿ ಇರುತ್ತದೆ. ಪ್ರಸ್ತುತ ಸದರಿ ಹುದ್ದೆಗೆ ಮುಂಬಡ್ತಿ ಹೊಂದಲು ಒಬ್ಬರು ಅಧಿಕಾರಿಯು ಅರ್ಹತೆ ಹೊಂದಿರುತ್ತಾರೆ. |
| ಇ) | ಆಡಳಿತಾತ್ಮಕ ಹಿತದೃಷ್ಟಿಯಿಂದ ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಗಳನ್ನು ಮುಂಬಡ್ತಿ ಮೂಲಕ ಯಾವಾಗ ಭರ್ತಿ ಮಾಡಲಾಗುವುದು?(ವಿವರ ನೀಡುವುದು) | ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳು, 2019ರನ್ವಯ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ವೃಂದಕ್ಕೆ ಮುಂಬಡ್ತಿ ಮೂಲಕ ಭರ್ತಿ ಮಾಡಲು ಇತ್ತೀಚೆಗೆ ಕನಿಷ್ಟ ಅರ್ಹತಾದಾಯಕ ಸೇವೆ ಪೂರೈಸಿರುವ ಒಬ್ಬರು ಅಧಿಕಾರಿಯು ಲಭ್ಯವಿದ್ದು, ಸದರಿ ಅಧಿಕಾರಿಯವರಿಗೆ ಮುಂಬಡ್ತಿ ನೀಡಲು ಪರಿಶೀಲನೆಯಲ್ಲಿರುತ್ತದೆ. |

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ

**<u>ಸಂಖ್ಯೆ:</u>** ಸಿಆಸುಇ 411 ಸಲುಸೇ 2022

**DEPARTMENT OF PERSONNEL AND ADMINISTRATIVE REFORMS**

**NOTIFICATION**

**No.DPAR 105 SRD 2014, Bengaluru, Dated:10.07.2019.**

Whereas the draft of the Karnataka Government Secretariat Services (Recruitment) Rules, 2019, which the Government of Karnataka proposes to make in exercise of the powers conferred by section 3 read with section 8 of the Karnataka State Civil Services Act, 1978 (Karnataka Act 14 of 1990) was published as required by clause (a) of sub-section (2) of section 3 of the Karnataka State Civil Services Act, 1978 in Notification No. DPAR 105 SRD 2014, in part IVA (PR No. 195) of the Karnataka Gazette dated 23.05.2019 inviting objections and suggestions from all persons likely to be affected thereby within fifteen days from the date of its publication in the Official Gazette.

Whereas, the said Gazette was made available to the public on 23.05.2019.

And Whereas objections and suggestions received in this behalf have been considered by the Government.

Now, therefore in exercise of the powers conferred by sub section (1) of section 3 read with section 8 of the Karnataka State Civil Services Act, 1978 (Karnataka Act 14 of 1990) the Government of Karnataka hereby makes the following rules.

**RULES**

**1. Title and Commencement.-** (1) These rules may be called the Karnataka Government Secretariat Services (Recruitment) Rules, 2019.

(2) They shall come into force from the date of their final publication in the Official Gazette.

**2. Method of Recruitment and Minimum Qualification.-** The establishment of the Karnataka Government Secretariat Services shall consist of such categories of posts with scales of pay as specified in column (2) of the Schedules below. their number, the method of recruitment and minimum

**3. Repeal and Savings.-** (1) The Karnataka Secretariat Services (Recruitment) Rules, 1992 are hereby repealed:

Provided that such repeal shall not affect,-

(a) the previous operation of the said rules or anything duly done or any action taken under the said rules; or

(b) any right, privilege, obligation or liability already acquired, accrued or incurred under the said rules.

By order and in the name of
Governor of Karnataka.

10/7/19
**(CHANDRAHAS G. TALUKAR)**
Deputy Secretary to Government
Department of Personnel and
Administrative Reforms
(Service Rules-2)

To:

The Compiler, Karnataka Gazette for publication in the Extra Ordinary Gazette and to supply 500 copies to the DPAR (Service Rule-D) immediately.

Copy to :

1. Chief Secretary to Government.
2. Additional Chief Secretary to Government.
3. Additional Chief Secretary and Development Commissioner
4. Additional Chief Secretary / Secretary to Chief Minister.
5. *Special Secretary to Governor.
6. All Additional Chief Secretaries/Principal Secretaries / Secretaries to Government.
7. All Additional Secretaries / Joint Secretaries / Deputy Secretaries / Under Secretaries to Government.
8. Director, Karnataka Government Secretariat Training Institute
9. Chief Librarian, Karnataka Government Secretariat Library
10. All Sections of the Secretariat
11. Secretary, Karnataka Government Secretariat Employees' Association
12. Secretary, Karnataka Government Secretariat Officers' Association
13. Guard File / Spare Copies.

(* With a covering letter)

This Notification is also available at Karnataka Government Secretariat Website:-
http://172.19.1.185/svlivesearch and
www.dpar.karnataka.gov.in/servicerules)

| | | | | |
|---|---|---|---|---|
| | | | | Karnataka or possess an equivalent qualification. |

**SCHEDULE-III**

**DEPARTMENT OF PARLIAMENTARY AFFAIRS**

| **Sl. No.** | **Category of Post and the scales of pay** | **Number of Posts** | **Method of Recruitment** | **Minimum Qualification** |
|---|---|---|---|---|
| **(1)** | **(2)** | **(3)** | **(4)** | **(5)** |
| 1. | **Secretary to Government, Department Parliamentary Affairs** (Rs.104600-150600) | 1 | By posting from the cadre of Special Secretary to Government, Department Of Parliamentary Affairs<br>OR<br>By deputation of an officer of the Judicial Service in the cadre of Super time scale District Judge selected by the State Government out of a panel of three officers in that cadre sought by the State Government. | - |
| 2. | **Special Secretary to Government, Department of Parliamentary Affairs** (Rs.104600-150600) | 1 | By promotion by selection from the cadre of Additional Draftsman and Ex-officio Additional Secretary to Government, Department of Parliamentary Affairs. | Must have put in a service not less than one year in the cadre of Additional Draftsman and Ex-officio Additional Secretary to Government, Department of Parliamentary Affairs. |

| | | | | |
|---|---|---|---|---|
| 3. | **Additional Draftsman and Ex-officio Additional Secretary to Government, Department of Parliamentary Affairs** (Rs.97100-141300) | 2 | By promotion from the cadre of Joint Draftsman and Ex-officio Joint Secretary to Government, Department of Parliamentary Affairs. | Must have put in a service of not less than one year in the cadre of Joint Draftsman and Ex-officio Joint Secretary to Government, Department of Parliamentary Affairs. |
| 4. | **Joint Draftsman and Ex-officio Joint Secretary to Government, Department of Parliamentary Affairs** (Rs.90500-123300) | 2 | By promotion from the cadre of Assistant Draftsman and Ex-officio Deputy Secretary to Government, Department of Parliamentary Affairs. | Must have put in a service of not less than five years in the cadre of Assistant Draftsman and Ex-officio Under/Deputy Secretary to Government, Department of Parliamentary Affairs of which must have served at least one year as Assistant Draftsman and Ex-Officio Deputy Secretary to Government. |
| 5. | **Additional Director (Translation) Department of Parliamentary Affairs** (Rs.74400-109600) | 1 | By promotion from the cadre of Assistant Director (Kannada).<br><br>Provided that, if no suitable person is available for promotion, then by deputation of a Deputy Director from the Directorate of Translation on his own pay scale.<br><br>Note: In case the post is filled by deputation of a Deputy Director, the post shall be deemed to be of the scale of pay of Deputy Director of Translation. | **For promotion.-** Must have put in a service of not less than three years in the cadre of Assistant Director (Kannada). |
| 6. | **Assistant Draftsman and Ex-** | 6 | Two posts shall be filled by deputation of an Officer of the | **For Deputation.-** (1) Must have |

| | | | | |
|---|---|---|---|---|
| | **Officio Under/Deputy Secretary, Department of Parliamentary Affairs** (Rs.56800-99600) | | Karnataka Judicial service in the cadre of Senior Civil Judge or Civil Judge and remaining posts shall be filled by promotion from the cadre of Section Officer (Drafting)<br><br>**Note:** (1) An officer of the Karnataka Judicial Service in the cadre of Senior Civil Judge or Civil Judge shall be initially taken on deputation for a period of one year; notwithstanding anything contained in sub-rule [3] of rule 50 of the Karnataka Civil Service Rules on his own pay If at the end of the said period, if he is found suitable, after obtaining his willingness he may be absorbed as Assistant Draftsman and Ex-officio Deputy or Under Secretary, as the case may be.<br>On such absorption: (i) if he was a Senior Civil judge before he was taken on deputation, his pay shall be fixed at the appropriate stage, in the Group A Senior Scale and<br><br>(ii) if he was a Civil Judge before he was taken on deputation, his pay shall be fixed at the appropriate stage in the Junior scale & he shall be given the Group A Senior scale from the | practised in Courts of Civil & Criminal Jurisdiction for a period of not less than four years.<br><br>(2) Must have worked for not less than four years as a Munsiff.<br><br>**For Promotion.-** Must have worked for a period of not less than five years as Section Officer (Drafting);<br><br>Provided that, if officers who have put in a minimum service of five years are not available, officers, who have put in a minimum service of three years shall be considered for promotion |

| | | | | |
|---|---|---|---|---|
| | | | fourth year from the date of his appointment on deputation.<br><br>[2] The designation of an Officer of Karnataka Judicial Service taken on deputation shall be Assistant Draftsman and Ex-officio Deputy Secretary, (i) if at the time of taking him on deputation he was a Senior Civil Judge; or (ii) if he is given the Group A senior scale under Note (1).<br><br>[3] The pay of the Assistant Draftsman promoted from the cadre of Section Officer (Drafting) shall be fixed at the appropriate stage in the Junior scale and he shall be given the Group A Senior scale from the *fourth* year of the date of his promotion and thereafter his designation shall be Assistant Draftsman and Ex-Officio Deputy Secretary to Government. | |
| 7. | **Assistant Director(Kannada), Department of Parliamentary Affairs**<br>(Rs.52650-97100) | 1 | By promotion from the cadre of Research Officer (Kannada) or by deputation of an officer in equivalent grade from the Directorate of Translation. | **For promotion.**-Must have put in a service of not less than three years in the cadre of Research Officer (Kannada). |
| 8. | **Section Officer (Drafting), Department of Parliamentary Affairs.** | 5 | By promotion from the cadre of Drafting Assistant. | **For promotion.**- Must have put in a service of not less than three years in the cadre of Drafting Assistant. |

| | | | | |
|---|---|---|---|---|
| | (Rs.43100-83900) | | If no eligible person is available for promotion, then by Posting of Section Officer in Karnataka Government Secretariat Services. If no eligible Section Officer is available for posting, then by Direct Recruitment in accordance with the Karnataka Civil Services (Direct Recruitment by Competitive Examination and Selection) (General) Rules, 2006; | **For Posting.-** The candidate must be a Graduate in Law of an University established by Law, must be particularly conversant with practice and procedures of Legislature, must have a good knowledge of constitutional Law and must be able to draft Bills, Statutory Rules & Notifications.<br><br>**For Direct Recruitment.-** The candidate must be graduate in Law of an University established by Law, preference being given to candidate who holds a degree of Master of Law and who has experience in drafting bills, Statutory Rules & Notification. He must be not more than 35 years of age on the last date fixed for receipt of applications. |
| 9. | **Research Officer (Kannada), Department of Parliamentary Affairs.**<br>(Rs.43100-83900) | 1 | By promotion from the cadre of Senior Translator. If no eligible person is available for promotion, then by deputation of an officer in the equivalent cadre from the Directorate of Translation. | Must have put in a service of not less than three years in the cadre of Senior Translator. |
| 10. | **Senior Translator (Kannada), Department of Parliamentary Affairs**<br>(Rs.40900-78200) | 1 | Notwithstanding anything contained in Rule 3(1) of the Karnataka Civil Service (General Recruitment) Rules 1977 by promotion by selection from the cadres of Assistant or Stenographer. If no person is | **For Promotion by Selection:**<br>Must be holder of a Post Graduate Degree (MA) in Kannada Language, at least in Second Class, of an University established by Law, in India, or equivalent qualification; or |

| | | | | |
|---|---|---|---|---|
| | | | available for promotion then, by deputation of an officer of equivalent cadre from the Directorate of translation. | Must be Graduate of an University with Kannada Language as Major optional subject and possess a Postgraduate Diploma in Translation awarded by an University established by law in India, or equivalent qualification. |
| 11. | **Drafting Assistant** (Rs.37900-70850) | 10 | **For promotion by selection:**<br><br>Notwithstanding anything contained in rule 3(1) of the Karnataka Civil Services (General Recruitment) Rules, 1977, by promotion by selection from the cadre of Assistant or Stenographer on the basis of examination to be conducted by the Selection Authority in accordance with the scheme of examination specified in the **Annexure** below:-<br><br>If no suitable person is available for promotion, then by direct recruitment or by deputation from any other services of State Government.<br><br>**Note:** A person in the cadre of Assistant or stenographer shall exercise an irrevocable option at the time of consideration of his promotion to the cadre of Drafting Assistant. Once option is exercised | **For Promotion by Selection/ Deputation.-** Must be holder of a Degree in Law.<br><br>**For Direct Recruitment**.- Must be holder of a Degree in Law. Preference will be given to candidates having first class degree in Law or is a holder of Master Degree in Law. |

| | | | | |
|---|---|---|---|---|
| | | | the person concerned has to seek his future career in that line only. | |

**ANNEXURE**

The examination shall consist of a written and oral examinations, conducted by a Selection Committee under the Chairmanship of the Secretary to Government, Department of Parliamentary Affairs and two other members namely one Deputy Secretary to Government, Department of Finance (B & R) and one Deputy Secretary to Government, Department of Personnel and Administrative Reforms (Administration), Assistant Draftsmen & Ex-officio Deputy Secretary to Government, Department of Parliamentary Affairs shall be convenor.

**II. Written Examination:-**

| Subject | Maximum Marks | Duration |
|---|---|---|
| **Paper-I**<br>I . The Constitution of India<br>Preamble<br>Part III : (Articles 12 to 31C), Part IV, IVA<br>Part V : Chapter I (Articles 53, 70, 73 to 78) Chapters II and III<br>Part VI : Chapters I to IV, Part IX, IXA, IXB<br>Part XI : Chapters I to II<br>Part XIII : Part XIV, Chapter I & II<br>Part XVI : (Complete)<br>Part XVII : Chapters I, II and III<br>Schedules : First, Second (Part A, Part C) Seventh, Ninth and Tenth | 50 | 2 hours |
| **Paper-II**<br>**I**<br>(1) The Karnataka Government (Allocation of Business) Rules, 1977 Schedule XI<br>(2) The Karnataka Government (Transaction of Business) Rules, 1977<br>(3) Karnataka Government Secretariat Manual of Office Procedure (Revised) 2005 } 30<br>**II** General English 10<br>VIVA - VOICE | 40<br><br><br><br><br><br>10 | 2 hours |

| | | | | |
|---|---|---|---|---|
| 12. | **Deputy Librarian (DPA)** | 1 | By posting of Deputy Librarian from the Secretariat Library | |

| | | | | | |
|---|---|---|---|---|---|
| | (Rs.43100-83900) | | | | |
| 13. | **Assistant Librarian (DPA)**<br>(Rs.30350-58250) | | 1 | By posting of an Assistant Librarian from the Secretariat Library | |

# ಕರ್ನಾಟಕ ವಿಧಾನ ಸಭೆ

1. ಸದಸ್ಯರ ಹೆಸರು : ಶ್ರೀ. ರವಿಸುಬ್ರಹ್ಮಣ್ಯ. ಎಲ್.ಎ (ಬಸವನಗುಡಿ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 416
3. ಉತ್ತರಿಸಬೇಕಾದ ದಿನಾಂಕ : 27-12-2022
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರಿ ನೌಕರರಿಗೆ ಆರೋಗ್ಯ ಸಂಜೀವಿನಿ (ಆರೋಗ್ಯ ಭಾಗ್ಯ) ಯೋಜನೆಯನ್ನು ಯಾವ ದಿನಾಂಕದಿಂದ ಜಾರಿಗೊಳಿಸಲಾಗಿದೆ; | ಕರ್ನಾಟಕ ಆರೋಗ್ಯ ಸಂಜೀವಿನಿ ಯೋಜನೆಯನ್ನು ರಾಜ್ಯ ಸರ್ಕಾರವು ರೂಪಿಸಿದ್ದು ಇದನ್ನು ಕಾರ್ಯಗತಗೊಳಿಸಲು ಕ್ರಮವಹಿಸಲಾಗುತ್ತಿದೆ. |
| ಆ) | ಸದರಿ ಯೋಜನೆ ಅನುಷ್ಠಾನಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಸದರಿ ಯೋಜನೆಯ ಅನುಷ್ಠಾನಕ್ಕೆ ಮೀಸಲಿಟ್ಟಿರುವ ಅನುದಾನವೆಷ್ಟು; | ಕರ್ನಾಟಕ ಆರೋಗ್ಯ ಸಂಜೀವಿನಿ ಯೋಜನೆಯ ಪ್ರಾರಂಭಿಕ ವೆಚ್ಚಗಳಿಗಾಗಿ ರೂ.122.00 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ. |
| ಈ) | ಸದರಿ ಯೋಜನೆಯ ಅನುಷ್ಠಾನಕ್ಕೆ ನಿವೃತ್ತಿಯಾಗಿರುವ ಎಷ್ಟು ಅಧಿಕಾರಿಗಳನ್ನು Consultant ಗಳಾಗಿ ನೇಮಕ ಮಾಡಿಕೊಳ್ಳಲಾಗಿದೆ; Consultant ಗಳ ಮಾಸಿಕ ಗೌರವ ಧನ ಹಾಗೂ Terms of Reference (TOR) ಗಳಿಗೆ ಸಂಬಂಧಪಟ್ಟ ಪೂರ್ಣ ವಿವರ ಹಾಗೂ ಆದೇಶ ಪ್ರತಿಯನ್ನು ಒದಗಿಸುವುದು? | ನಿವೃತ್ತಿಯಾಗಿರುವ ಯಾವುದೇ ಅಧಿಕಾರಿಗಳನ್ನು ಕರ್ನಾಟಕ ಆರೋಗ್ಯ ಸಂಜೀವಿನಿ ಯೋಜನೆಯ ಅನುಷ್ಠಾನಕ್ಕಾಗಿ ನೇಮಕ ಮಾಡಿಕೊಂಡಿರುವುದಿಲ್ಲ. |

ಇ-ಕಡತ ಸಂಖ್ಯೆ: ಸಿಆಸುಇ 182 ಎಸ್‌ಎಂಆರ್ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 417

ಸದಸ್ಯರ ಹೆಸರು : ಶ್ರೀ ರವಿಸುಬ್ರಹ್ಮಣ್ಯ ಎಲ್.ಎ (ಬಸವನಗುಡಿ)

ಉತ್ತರಿಸುವ ದಿನಾಂಕ : 27.12.2022

ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಪ್ರಶ್ನೆ | ಉತ್ತರ |
|---|---|
| ಅ) ಪ್ರಸ್ತುತ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಮೀಸಲಾತಿ ಹೆಚ್ಚಿಸಿರುವ ಹಿನ್ನೆಲೆಯಲ್ಲಿ ನೌಕರರಿಗೆ ನೀಡುವ ಮುಂಬಡ್ತಿಯನ್ನು ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಬಂಧ ಪಟ್ಟ ಆದೇಶ ಪ್ರತಿಯನ್ನು ನೀಡುವುದು)<br><br>ಆ) ಬಂದಿದ್ದಲ್ಲಿ, ಹಲವಾರು ಇಲಾಖೆಯಲ್ಲಿ ನಿವೃತ್ತಿ ಅಂಚಿನಲ್ಲಿರುವ ಅಧಿಕಾರಿ, ನೌಕರರು ಮುಂಬಡ್ತಿಯಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು (ಶೈಕ್ಷಣಿಕ ಸಂಸ್ಥೆಗಳಲ್ಲಿನ ಸ್ಥಾನಗಳಲ್ಲಿ ಮತ್ತು ರಾಜ್ಯಾಧೀನ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳಲ್ಲಿ ಮೀಸಲಾತಿ) ಅಧಿನಿಯಮ 2022ರನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೀಸಲಾತಿ ಪ್ರಮಾಣವನ್ನು ಹೆಚ್ಚಿಸಿರುವ ಹಿನ್ನೆಲೆಯಲ್ಲಿ ಈ ಅಧಿನಿಯಮವನ್ನು ಜಾರಿಗೊಳಿಸಲು ರೋಸ್ಟರ್ ಬಿಂದುಗಳನ್ನು ನಿಗದಿಪಡಿಸುವ ಪ್ರಕ್ರಿಯೆಯು ಅಂತಿಮಗೊಂಡು ಅಧಿಸೂಚಿತವಾಗುವವರೆಗೆ ಎಲ್ಲಾ ನೇರ ನೇಮಕಾತಿ ಪ್ರಕ್ರಿಯೆಯನ್ನು ತಡೆಹಿಡಿಯಲು ಮತ್ತು ಮೀಸಲಾತಿ ಅನ್ವಯವಾಗುವ ಪರಿಗಣಿಸಲಾಗುವ ಮುಂಬಡ್ತಿ ಪ್ರಕ್ರಿಯೆಗೆ ಸಂಬಂಧಿಸಿದಂತೆ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ಆಯೋಜಿಸಬಾರದೆಂದು ಸೂಚಿಸಲಾಗಿದೆ. |
| ಇ) ಹಾಗಿದ್ದಲ್ಲಿ, ಅನುಸೂಚಿತ ಜಾತಿ ಹಾಗೂ ಪಂಗಡಗಳಿಗೆ ರೋಸ್ಟರ್ ಬಿಂದುಗಳನ್ನು ನಿಗದಿಪಡಿಸಿ ಪರಿಷ್ಕೃತಗೊಳಿಸಲು ಹಾಗೂ ಕಾಲಬದ್ಧ ಸಮಯದಲ್ಲಿ ಆದೇಶ ಹೊರಡಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; (ಸಂಪೂರ್ಣ ವಿವರ ನೀಡುವುದು)<br><br>ಈ) ರೋಸ್ಟರ್ ಬಿಂದುಗಳನ್ನು ನಿಗದಿಪಡಿಸಿ ಪರಿಷ್ಕೃತ ಆದೇಶವನ್ನು ಶೀಘ್ರವೇ ಹೊರಡಿಸಿರುವುದರಿಂದ ನಿವೃತ್ತಿ ಅಂಚಿನಲ್ಲಿರುವ ಹಾಗೂ ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡದ ನೌಕರರಿಗೆ ಮುಂಬಡ್ತಿ ನೀಡುವ ನಿಟ್ಟಿನಲ್ಲಿ ಸರ್ಕಾರ ಕ್ರಮ ಕೈಗೊಳ್ಳುವುದೇ? ಸಂಪೂರ್ಣ ವಿವರಗಳನ್ನು ನೀಡುವುದು) | ಪರಿಶೀಲನೆಯ ಹಂತದಲ್ಲಿರುತ್ತದೆ. |

ಸಂಖ್ಯೆ: ಸಿಆಸುಇ 273 ಸೇನಿನಿ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ವಂದಿತಾ ಶರ್ಮಾ, ಭಾ.ಆ.ಸೇ.,
ಮುಖ್ಯ ಕಾರ್ಯದರ್ಶಿ
VANDITA SHARMA, I.A.S.,
Chief Secretary



ಕರ್ನಾಟಕ ಸರ್ಕಾರ
Government of Karnataka

ಸಂಖ್ಯೆ: ಮುಕಾ/ಎ01089ಗ /2022 ದಿನಾಂಕ: 17.11.2022

**ಟಿಪ್ಪಣಿ**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಂವ್ಯಶಾಇ:29:ಶಾಸನ:2022: ದಿ:23.10.2022ರ ಮೂಲಕ ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು (ಶೈಕ್ಷಣಿಕ ಸಂಸ್ಥೆಗಳಲ್ಲಿನ ಸ್ಥಾನಗಳಲ್ಲಿ ಮತ್ತು ರಾಜ್ಯಾಧೀನ ಸೇವೆಗಳಲ್ಲಿನ ನೇಮಕಾತಿ ಅಥವಾ ಹುದ್ದೆಗಳಲ್ಲಿ ಮೀಸಲಾತಿ) ಆಧ್ಯಾದೇಶ, 2022ನ್ನು ದಿನಾಂಕ:01.11.2022ರಿಂದ ಜಾರಿಗೊಳಿಸಲಾಗಿರುತ್ತದೆ.

ಇದರನ್ವಯ ರಾಜ್ಯಾಧೀನ ಸೇವೆಗಳಲ್ಲಿನ ನೇರ ನೇಮಕಾತಿ ಅಥವಾ ಪದೋನ್ನತಿಯಲ್ಲಿ ಅನುಸೂಚಿತ ಜಾತಿಗಳಿಗೆ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ **ಹೆಚ್ಚಿಸಲಾಗಿರುವ ಮೀಸಲಾತಿಯನ್ನು ಜಾರಿಗೊಳಿಸಲು ರೋಸ್ಟರ್ ಬಿಂದುಗಳನ್ನು ಗುರುತಿಸುವ ಪ್ರಕ್ರಿಯೆಯು ಚಾಲನೆಯಲ್ಲಿದ್ದು, ಈ ಪ್ರಕ್ರಿಯೆಯು ಅಂತಿಮಗೊಂಡು ಅಧಿಕೃತವಾಗಿ ಪ್ರಕಟವಾಗುವ ವರೆಗೆ ಎಲ್ಲಾ ನೇರ ನೇಮಕಾತಿ ಪ್ರಕ್ರಿಯೆಯನ್ನು ತಡೆಹಿಡಿಯಲು ಮತ್ತು ಮೀಸಲಾತಿ ಅನ್ವಯವಾಗುವ ವೃಂದಗಳಿಗೆ ನೀಡಲಾಗುವ ಮುಂಬಡ್ತಿ ಪ್ರಕ್ರಿಯೆಗೆ ಸಂಬಂಧಿಸಿದಂತೆ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ಆಯೋಜಿಸಬಾರದೆಂದು ಸೂಚಿಸಿದೆ.**

(ವಂದಿತಾ ಶರ್ಮಾ),
ಸರ್ಕಾರದ ಮುಖ್ಯ ಕಾರ್ಯದರ್ಶಿ

ಗೆ:
ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿ/
ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳು.

Secretary to Govt.
D.P.A.R.

ಕೊಠಡಿ ಸಂಖ್ಯೆ: 320, 3ನೇ ಮಹಡಿ, ವಿಧಾನ ಸೌಧ, ಬೆಂಗಳೂರು - 560 001, ದೂರವಾಣಿ ಕಛೇರಿ: +91-80-22252442 / 22033300 ಫ್ಯಾಕ್ಸ್: +91-80-22258913
Room No. 320, 3rd Floor, Vidhana Soudha, Bengaluru - 560 001, Phone. off. +91-80-22252442 / 22033300 Fax: +91-80-22258913
E-mail : cs@karnataka.gov.in



## ಕರ್ನಾಟಕ ಸರ್ಕಾರ

ಸಂಖ್ಯೆ: ಸಿಆಸುಇ 240 ಸೇನೆನಿ 2022

ಕರ್ನಾಟಕ ಸರ್ಕಾರದ ಸಚಿವಾಲಯ
ವಿಧಾನ ಸೌಧ,
ಬೆಂಗಳೂರು, ದಿನಾಂಕ: 18.11.2022

## ಸುತ್ತೋಲೆ

ವಿಷಯ: ನೇರ ನೇಮಕಾತಿ ಮತ್ತು ಮುಂಬಡ್ತಿ ಪ್ರಕ್ರಿಯೆ ಕೈಗೊಳ್ಳುವ ಬಗ್ಗೆ ಸೂಚನೆಗಳು.

ಉಲ್ಲೇಖ: 1. ದಿನಾಂಕ: 31.10.2022ರ ಅಧಿಸೂಚನೆ ಸಂಖ್ಯೆ: ಸಕಇ 84 ಎಸ್ ಟಿಪಿ 2021
2. ದಿನಾಂಕ:17.11.2022ರ ಟಿಪ್ಪಣಿ ಸಂಖ್ಯೆ: ಮುಕಾ/ 502089/ 2022.

*~*~*~*~*

ದಿನಾಂಕ: 31.10.2022ರ ಉಲ್ಲೇಖಿತ (1)ರಲ್ಲಿನ ಅಧಿಸೂಚನೆ ಸಂಖ್ಯೆ: ಸಕಇ 84 ಎಸ್ ಟಿಪಿ 2021ರನ್ವಯ ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು (ಶೈಕ್ಷಣಿಕ ಸಂಸ್ಥೆಗಳಲ್ಲಿನ ಸ್ಥಾನಗಳಲ್ಲಿ ಮತ್ತು ರಾಜ್ಯಾಧೀನ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳಲ್ಲಿ ಮೀಸಲಾತಿ) ಅಧ್ಯಾದೇಶ 2022ರ ಉಪಬಂಧಗಳು ದಿನಾಂಕ: 01.11.2022ರಿಂದ ಜಾರಿಗೆ ಬರತಕ್ಕದ್ದೆಂದು ಗೊತ್ತುಪಡಿಸಲಾಗಿರುತ್ತದೆ.

ದಿನಾಂಕ: 17.11.2022ರ ಉಲ್ಲೇಖ (2)ರಲ್ಲಿನ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಕಾ/ 502/ 089/2022ರಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಎಲ್ಲಾ ನೇರ ನೇಮಕಾತಿ ಮತ್ತು ಮೀಸಲಾತಿ ಅನ್ವಯವಾಗುವ ವೃಂದಗಳಿಗೆ ನೀಡಲಾಗುವ ಮುಂಬಡ್ತಿ ಪ್ರಕ್ರಿಯೆಗೆ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ಆಯೋಜಿಸದಂತೆ ಎಲ್ಲಾ ನೇಮಕಾತಿ ಪ್ರಾಧಿಕಾರಗಳಿಗೆ ಸೂಚನೆಗಳನ್ನು ನೀಡಲಾಗಿದೆ.

ಈ ಹಿನ್ನೆಲೆಯಲ್ಲಿ **ದಿನಾಂಕ: 01.11.2022ರ ಪೂರ್ವದಲ್ಲಿಯೇ** ನೇರ ನೇಮಕಾತಿಗಾಗಿ ಅಧಿಸೂಚನೆ ಹೊರಡಿಸಿದ್ದಲ್ಲಿ ಅಥವಾ ಆಯ್ಕೆ ಪ್ರಕ್ರಿಯೆ ಪ್ರಾರಂಭಗೊಂಡಿದ್ದಲ್ಲಿ ಅಂತಹ ನೇಮಕಾತಿಗಳನ್ನು ನೇರ ನೇಮಕಾತಿಗಾಗಿ ಹೊರಡಿಸಲಾಗಿದ್ದ ಅಧಿಸೂಚನೆಯನ್ವಯವೇ ಪೂರ್ಣಗೊಳಿಸುವಂತೆ ಹಾಗೂ ಮುಂಬಡ್ತಿ ನೀಡಲು ಇಲಾಖಾ ಮುಂಬಡ್ತಿ ಸಮಿತಿ ಸಭೆ ನಡೆಸಿ ಮುಂಬಡ್ತಿ ಆದೇಶವನ್ನು ಹೊರಡಿಸಲು ಬಾಕಿ ಇರುವ ಪ್ರಕರಣಗಳನ್ನು ಆ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ತೀರ್ಮಾನದನ್ವಯ ಪೂರ್ಣಗೊಳಿಸುವಂತೆ ಸೂಚಿಸಲಾಗಿದೆ. ಮುಂದುವರೆದು, **ದಿನಾಂಕ: 01.11.2022ರಿಂದ ದಿನಾಂಕ: 17.11.2022ರ ಅವಧಿಯಲ್ಲಿ ಇಲಾಖಾ ಮುಂಬಡ್ತಿ ಸಮಿತಿ ಸಭೆ ನಡೆಸಿ ನೀಡಿರುವ ಎಲ್ಲಾ ಮುಂಬಡ್ತಿ ಆದೇಶಗಳನ್ನು ತಕ್ಷಣವೇ ಹಿಂಪಡೆಯಲು** ಎಲ್ಲಾ ನೇಮಕಾತಿ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ.

ಮೇಲ್ಕಂಡ ಸೂಚನೆಗಳು ಎಲ್ಲಾ ಸ್ವಾಯತ್ತ ಸಂಸ್ಥೆಗಳು/ ವಿಶ್ವವಿದ್ಯಾಲಯಗಳು/ ಸಾರ್ವಜನಿಕ ಉದ್ದಿಮೆ/ ಆಯೋಗ/ ನಿಗಮ/ ಮಂಡಳಿಗಳು ಮತ್ತು ಸರ್ಕಾರದಿಂದ ಅನುದಾನಪಡೆಯುವ ಸಂಸ್ಥೆಗಳಿಗೂ ಸಹ ಅನ್ವಯಿಸುತ್ತದೆ.

18-11-2022
(ವೀರಭದ್ರು)
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-1).

ಇವರಿಗೆ:

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು, ರಾಜ್ಯಪತ್ರದಲ್ಲಿ ಪ್ರಕಟಿಸಿ ಇದರ 100 ಪ್ರತಿಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-ಎ), ಕೊಠಡಿ ಸಂಖ್ಯೆ: 31, ವಿಧಾನ ಸೌಧ, ನೆಲಮಹಡಿ ಇಲ್ಲಿಗೆ ಕಳುಹಿಸುವಂತೆ ಕೋರಲಾಗಿದೆ.

<u>ಪ್ರತಿ:</u>

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಹಾಗೂ ಅಭಿವೃದ್ಧಿ ಆಯುಕ್ತರು.
3. ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು.
4. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರು.
5. ಎಲ್ಲಾ ಇಲಾಖಾ ಮುಖ್ಯಸ್ಥರು/ಎಲ್ಲಾ ಪ್ರಾದೇಶಿಕ ಆಯುಕ್ತರು/ ಎಲ್ಲಾ ಜಿಲ್ಲಾಧಿಕಾರಿಗಳು/ ಎಲ್ಲಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ಎಲ್ಲಾ ಜಿಲ್ಲಾ ಪೊಲೀಸ್ ಅಧೀಕ್ಷಕರು.
6. ಮಾನ್ಯ ರಾಜ್ಯಪಾಲರ ವಿಶೇಷ ಕಾರ್ಯದರ್ಶಿಯವರು.
7. ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು.
8. *ಮಹಾ ನಿಬಂಧಕರು, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು.
9. *ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.
10. *ನಿಬಂಧಕರು, ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, ಕೆ.ಜಿ.ರಸ್ತೆ, ಬೆಂಗಳೂರು.
11. *ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.
12. *ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ/ಪರಿಷತ್ತು, ಬೆಂಗಳೂರು.
13. ಸರ್ಕಾರದ ಎಲ್ಲಾ ವಿಶೇಷ/ಅಪರ/ಜಂಟಿ/ಉಪ/ಅಧೀನ ಕಾರ್ಯದರ್ಶಿಗಳು.
14. ಸಚಿವಾಲಯದ ಎಲ್ಲಾ ಶಾಖೆಗಳು
15. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು.
16. ಶಾಖಾ ರಕ್ಷಾ ಕಡತ/ಬಿಡಿ ಪ್ರತಿಗಳು.

(*ಮುಖ ಪತ್ರದೊಂದಿಗೆ)

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ 14ನೇ ಅಧಿವೇಶನ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 418

ಸದಸ್ಯರ ಹೆಸರು : ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ. ಕೋಟೆ)

ಉತ್ತರಿಸುವ ದಿನಾಂಕ : 27-12-2022

ಉತ್ತರಿಸುವವರು : ಸನ್ಮಾನ್ಯ ಮುಖ್ಯಮಂತ್ರಿಗಳು

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಹೆಗ್ಗಡದೇವನಕೋಟೆ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯ ಹುಣಸೂರು ಮತ್ತು ಬಂಡೀಪುರ ವಿಭಾಗ ವ್ಯಾಪ್ತಿಯಲ್ಲಿನ ಪ್ರದೇಶದಲ್ಲಿ ವನ್ಯಜೀವಿ ಹಾಗೂ ಮಾನವ ಸಂಘರ್ಷದ ಹಿನ್ನೆಲೆಯಲ್ಲಿ ಜನ-ಜಾನುವಾರು ಪ್ರಾಣ ಹಾನಿ ಹಾಗೂ ಬೆಳೆಗಳಿಗೆ ಹಾನಿ ಸಂಬಂಧ ಕಳೆದ 3 ವರ್ಷಗಳಲ್ಲಿ ದಾಖಲಾದ ಪ್ರಕರಣಗಳ ಸಂಖ್ಯೆ ಎಷ್ಟು ಮತ್ತು ಯಾವುವು; (ಪ್ರಕರಣಗಳ ವಿವರ ನೀಡುವುದು)</td><td>ಹೆಗ್ಗಡದೇವನಕೋಟೆ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ, ಹುಣಸೂರು ಮತ್ತು ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶವು ಬರುತ್ತದೆ.<br><br>ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ, ಬೆಳನಷ್ಟ ಹಾಗೂ ಜಾನುವಾರು ಹತ್ಯೆ ದಾಖಲಾಗಿರುವ ಪರಿಹಾರದ ಪ್ರಕರಣಗಳ ವಿವರ ಕೆಳಕಂಡಂತಿದೆ:-<br><br>
<table>
<tr><th>ಪ್ರಕರಣದ ವಿಧ</th><th>2019-20</th><th>2020-21</th><th>2021-22</th></tr>
<tr><td>ಮಾನವ ಪ್ರಾಣಹಾನಿ</td><td>-</td><td>3</td><td>3</td></tr>
<tr><td>ಬೆಳೆ ನಷ್ಟ</td><td>942</td><td>993</td><td>911</td></tr>
<tr><td>ಜಾನುವಾರು ಹತ್ಯೆ</td><td>61</td><td>83</td><td>111</td></tr>
</table>
ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ, ಬೆಳನಷ್ಟ ಹಾಗೂ ಜಾನುವಾರು ಹತ್ಯೆ ದಾಖಲಾಗಿರುವ ಪರಿಹಾರದ ಪ್ರಕರಣಗಳ ವಿವರ ಕೆಳಕಂಡಂತಿದೆ:-<br><br>
<table>
<tr><th>ಪ್ರಕರಣದ ವಿಧ</th><th>2019-20</th><th>2020-21</th><th>2021-22</th></tr>
<tr><td>ಮಾನವ ಪ್ರಾಣಹಾನಿ</td><td>5</td><td>2</td><td>0</td></tr>
<tr><td>ಬೆಳೆ ನಷ್ಟ</td><td>3618</td><td>2679</td><td>2727</td></tr>
<tr><td>ಜಾನುವಾರು ಹತ್ಯೆ</td><td>368</td><td>318</td><td>475</td></tr>
</table>
</td></tr>
<tr><td>(ಆ)</td><td>ಹಾನಿಯಾದ ಪ್ರಕರಣಗಳಲ್ಲಿ ಪರಿಹಾರ ನೀಡಲಾಗಿದೆಯೇ; (ಪ್ರಕರಣವಾರು ಸಂಪೂರ್ಣ ವಿವರ ನೀಡುವುದು)</td><td>ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ, ಬೆಳನಷ್ಟ ಹಾಗೂ ಜಾನುವಾರು ಹತ್ಯೆ ಪ್ರಕರಣಗಳಿಗೆ ಪರಿಹಾರ ನೀಡಿರುವ ವಿವರ ಕೆಳಕಂಡಂತಿದೆ:-<br><br>(ಮೊತ್ತ ರೂ.ಗಳಲ್ಲಿ)
<table>
<tr><th>ಪ್ರಕರಣದ ವಿಧ</th><th>2019-20</th><th>2020-21</th><th>2021-22</th></tr>
<tr><td>ಮಾನವ ಪ್ರಾಣಹಾನಿ</td><td>-</td><td>22,50,000/-</td><td>22,50,000/-</td></tr>
<tr><td>ಬೆಳೆ ನಷ್ಟ</td><td>66,71,034/-</td><td>51,05,017/-</td><td>51,92,046/-</td></tr>
<tr><td>ಜಾನುವಾರು ಹತ್ಯೆ</td><td>4,80,000/-</td><td>5,71,000/-</td><td>12,46,000/-</td></tr>
</table>
ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ, ಬೆಳನಷ್ಟ, ಹಾಗೂ ಜಾನುವಾರು ಹತ್ಯೆ ಪ್ರಕರಣಗಳಿಗೆ ಪರಿಹಾರ ನೀಡಿರುವ ವಿವರ ಕೆಳಕಂಡಂತಿದೆ:-</td></tr>
</table>

...2

(ಮೊತ್ತ ರೂ.ಗಳಲ್ಲಿ)

| ಪ್ರಕರಣದ ವಿಧ | 2019-20 | 2020-21 | 2021-22 |
|---|---|---|---|
| ಮಾನವ ಪ್ರಾಣಹಾನಿ | 25,50,000/- | 15,00,000/- | - |
| ಬೆಳೆ ನಷ್ಟ | 1,20,68,467/- | 91,28,414/- | 1,03,10,390/- |
| ಜಾನುವಾರು ಹತ್ಯೆ | 25,83,000/- | 23,66,000/- | 50,14,000/- |

(ಇ) ಮೇಲ್ಕಂಡ ವಿಭಾಗಗಳ ವ್ಯಾಪ್ತಿಯಲ್ಲಿ ಬರುವ ವನ್ಯಜೀವಿ ವಲಯಗಳು ಯಾವುವು ಮತ್ತು ಅದರ ಅರಣ್ಯ ಪ್ರದೇಶದ ಒಟ್ಟು ವಿಸ್ತೀರ್ಣ, ಕಾಡಂಚಿನ ಪ್ರದೇಶದ ಅರಣ್ಯ ಪ್ರದೇಶದ ಉದ್ದ ಎಷ್ಟು;

ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ ವ್ಯಾಪ್ತಿಯಲ್ಲಿ 3 ವಲಯಗಳಿದ್ದು ಅರಣ್ಯ ಪ್ರದೇಶದ ವಿಸ್ತೀರ್ಣ ಹಾಗೂ ಕಾಡಂಚಿನ ಪ್ರದೇಶದ ವಿವರ ಈ ಕೆಳಕಂಡಂತಿದೆ:-

| ಕ್ರ.ಸಂ | ವಲಯ | ಒಟ್ಟು ವಿಸ್ತೀರ್ಣ (ಚ.ಕಿ.ಮೀ.ಗಳಲ್ಲಿ) | ಕಾಡಂಚಿನ ಗಡಿ (ಕಿ.ಮೀ.ಗಳಲ್ಲಿ) |
|---|---|---|---|
| 1 | ಡಿ.ಬಿ.ಕುಪ್ಪೆ | 149.00 | 1.40 |
| 2 | ಅಂತರಸಂತೆ | 74.80 | 12.80 |
| 3 | ಮೇಟಿಕುಪ್ಪೆ | 94.40 | 25.30 |
| | **ಒಟ್ಟು** | **318.20** | **39.50** |

ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶ ವ್ಯಾಪ್ತಿಯಲ್ಲಿ 6 ವಲಯಗಳಿದ್ದು ಅರಣ್ಯ ಪ್ರದೇಶದ ವಿಸ್ತೀರ್ಣ ಹಾಗೂ ಕಾಡಂಚಿನ ಪ್ರದೇಶದ ವಿವರ ಈ ಕೆಳಕಂಡಂತಿದೆ:-

| ಕ್ರ.ಸಂ. | ವಲಯ | ಒಟ್ಟು ವಿಸ್ತೀರ್ಣ (ಚ.ಕಿ.ಮೀ.ಗಳಲ್ಲಿ) | ಕಾಡಂಚಿನ ಗಡಿ (ಕಿ.ಮೀ.ಗಳಲ್ಲಿ) |
|---|---|---|---|
| 1 | ಹೆಡಿಯಾಲ | 102.500 | 26.00 |
| 2 | ಮೊಳೆಯೂರು | 96.250 | 38.00 |
| 3 | ಎ.ಎಂ.ಗುಡಿ | 104.500 | - |
| 4 | ಎನ್.ಬೇಗೂರು | 54.690 | 16.00 |
| 5 | ಗುಂಡ್ರೆ | 61.250 | 3.00 |
| 6 | ನುಗು | 30.320 | 26.00 |
| | **ಒಟ್ಟು** | **449.51** | **109.00** |

(ಈ) ಮೇಲ್ಕಂಡ ಅರಣ್ಯ ವಲಯಗಳ ಕಾಡಂಚಿನ ಪ್ರದೇಶದಲ್ಲಿ ವನ್ಯಜೀವಿ ಹಾಗೂ ಮಾನವ ಸಂಘರ್ಷ ತಪ್ಪಿಸಲು ವಿವಿಧ ತಂತ್ರಜ್ಞಾನಗಳಾದ ಆನೆ ತಡೆಗೋಡೆ, ಟೆಂಟಕಲ್ ಫೆನ್ಸಿಂಗ್, ರೋಪ್ ಟೆಕ್ನಿಕ್ ಹಾಗೂ ರೈಲ್ವೆ ಬ್ಯಾರಿಕೇಡ್ ಮುಂತಾದ ವಿನ್ಯಾಸಗಳನ್ನು ಎಷ್ಟು ಕಿ.ಮೀ.ಗಳಲ್ಲಿ ನಿರ್ಮಾಣ ಮಾಡಲಾಗಿದೆ; ನಿರ್ಮಾಣ ಮಾಡಲಾಗಿರುವ ವರ್ಷ ಹಾಗೂ ಅದಕ್ಕೆ ತಗುಲಿರುವ ವೆಚ್ಚದ ವಿವರ ನೀಡುವುದು ಹಾಗೂ ಟೆಕ್ನಿಕಲ್ ಫೆನ್ಸಿಂಗ್ ನಿರ್ಮಿಸಲು ಬಾಕಿ ಇರುವ ಉದ್ದವೆಷ್ಟು;

2021-22ನೇ ಸಾಲಿನಲ್ಲಿ ಈ ಕೆಳಕಂಡ ಅರಣ್ಯ ವಲಯಗಳಲ್ಲಿ ನಿರ್ಮಾಣ ಮಾಡಿರುವ ಆನೆ ತಡೆಕಂದಕ ಹಾಗೂ ರೈಲ್ವೆ ಬ್ಯಾರಿಕೇಡ್ ವಿವರಗಳು ಕೆಳಕಂಡಂತಿವೆ:-

1. ಆನೆ ತಡೆ ಗೋಡೆ ನಿರ್ಮಾಣ

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ವಲಯ | ಪರಿಮಾಣ | ತಗಲಿರುವ ವೆಚ್ಚ | ಬರುವ ಗ್ರಾಮಗಳು |
|---|---|---|---|---|
| 1 | ಹೆಡಿಯಾಲ | 0.78 ಕಿ.ಮೀ. | 10.180 | ನಾಗಣಪುರ, ಹಾದನೂರು, ಕಾಡಿಗುಡ್ಡದಕಾವಲು, ಹಾದನೂರು ವಡೆಯನಪುರ, ಬಂಕಹಳ್ಳಿ, ಚನ್ನಗುಂಡಿ, ಮಡುವಿನಹಳ್ಳಿ, ಆಲಳಹಳ್ಳಿ, ಹೊಸಬೀಡುಕಾವಲು, ಬರಗಿ, ಮುತ್ತಿಗೆ ಚಿಕ್ಕತಳಲು, ಕಲ್ಲಹಳ್ಳಿ ಹೊಸವೀಡು, ಸಿದ್ದಪುರ. |

2. ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಕಾಮಗಾರಿಗಳು:

(ರೂ.ಲಕ್ಷಗಳಲ್ಲಿ)

| ಕ್ರಸಂ | ವಲಯ | ಪರಿಮಾಣ | ತಗಲಿರುವ ವೆಚ್ಚ | ಬರುವ ಗ್ರಾಮಗಳು |
|---|---|---|---|---|
| 1. | ಮದ್ದೂರು | 1.950 ಕಿ.ಮೀ. | 275.278 | ಬೇರಂಬಾಡಿ, ಹೊಂಗಳ್ಳಿ, ಬರಗಿ, ಚನ್ನಮಲ್ಲೀಪುರ, ಮದ್ದೂರು ಕಾಲೋನಿ, ಕಣ್ಣೇಗಾಲ, ಮದ್ದೂರು . |

| | | |
|---|---|---|
| (ಉ) | ಟೆಕ್ನಿಕಲ್ ಫೆನ್ಸಿಂಗ್ ನಿರ್ಮಿಸಲು ಬಾಕಿ ಇರುವ ಉದ್ದವನ್ನು ಕ್ರಮಿಸಲು ಇಲಾಖೆಯಿಂದ ರೂಪಿಸಿರುವ ಯೋಜನೆಗಳೇನು? | 2021-22ನೇ ಸಾಲಿನ ಅಂತ್ಯಕ್ಕೆ ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶದ ವಿವಿಧ ವಲಯಗಳಲ್ಲಿ ಟೆಂಟಕಲ್, ಸೋಲಾರ್ ಫೆನ್ಸ್ ಅನ್ನು 58.50 ಕಿ.ಮೀ. ನಿರ್ಮಾಣ ಮಾಡಲಾಗಿದ್ದು, ಒಟ್ಟು 125.65 ಕಿಮೀ. ಸೋಲಾರ್ ಬೇಲಿ ನಿರ್ಮಾಣ ಕಾರ್ಯ ಮುಗಿದಿದ್ದು, ವಿವಿಧ ವಲಯಗಳಿಗೆ ಸಂಬಂಧಿಸಿದಂತೆ ಬಾಕಿ ಇರುವ ಟೆಂಟಿಕಲ್ ಸೋಲಾರ್ ಫೆನ್ಸ್ ನಿರ್ಮಾಣ ಕಾಮಗಾರಿಯನ್ನು ಆದ್ಯತೆಗೆ ಅನುಗುಣವಾಗಿ 2022-23ನೇ ಸಾಲಿನ ವಿವಿಧ ಲೆಕ್ಕ ಶೀರ್ಷಿಕೆಯ ಕ್ರಿಯಾ ಯೋಜನೆಯಲ್ಲಿ ಅಳವಡಿಸಿಕೊಂಡು ಕಾಮಗಾರಿ ಕೈಗೊಳ್ಳಲಾಗಿರುತ್ತದೆ. ವಿವರ ಕೆಳಕಂಡಂತಿದೆ:- |

| ಲೆಕ್ಕಶೀರ್ಷಿಕೆ | ವಲಯ | ಅಂತರ (ಕಿ.ಮೀ.ಗಳಲ್ಲಿ) | ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| **ಕಾಂಪಾ** | ಕುಂದುಕೆರೆ | 1.93 | 10.600 |
| | ಕುಂದುಕೆರೆ | 8.20 | 49.200 |
| | ಕುಂದುಕೆರೆ | 1.92 | 11.520 |
| | ಎನ್. ಬೇಗೂರು | 1.90 | 10.440 |
| | ಓಂಕಾರ | 3.15 | 17.300 |
| | ಓಂಕಾರ | 4.50 | 24.710 |
| | ಓಂಕಾರ | 4.00 | 21.970 |
| | ಹೆಡಿಯಾಲ | 3.20 | 19.200 |
| | ಬಂಡೀಪುರ | 4.00 | 24.000 |
| | ಜಿ.ಎಸ್. ಬೆಟ್ಟ | 4.50 | 27.000 |
| | | **37.30** | **215.940** |
| ಮಾನವ-ವನ್ಯಜೀವಿ ಸಂಘರ್ಷ (MAC) | ಕುಂದುಕೆರೆ | 3.80 | **27.50** |
| | ಹೆಡಿಯಾಲ | 1.20 | |

**ಸಂಖ್ಯೆ: ಅಪಜೀ 186 ಎಫ್‌ಡಬ್ಲ್ಯೂಎಲ್ 2022**

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

14ನೇ ಅಧಿವೇಶನ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **419** |
| ಸದಸ್ಯರ ಹೆಸರು | : | ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) |
| ಉತ್ತರಿಸಬೇಕಾದ ದಿನಾಂಕ | : | 27.12.2022 |
| ಉತ್ತರಿಸುವವರು | : | ಸನ್ಮಾನ್ಯ ಮುಖ್ಯ ಮಂತ್ರಿಗಳು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅರಣ್ಯ ಇಲಾಖೆಯಿಂದ 'ಪರಿಭಾವಿತ ಅರಣ್ಯ' ವೆಂದು ಪರಿಗಣಿಸಿ ಆದೇಶಿಸಿರುವ ಜಮೀನುಗಳು ಯಾವುವು; ವಿಸ್ತೀರ್ಣವೆಷ್ಟು; (ಆದೇಶ ಪ್ರತಿಯೊಂದಿಗೆ ಮಾಹಿತಿ ನೀಡುವುದು) | ರಾಜ್ಯದಲ್ಲಿ ಪರಿಭಾವಿತ ಅರಣ್ಯ ಪ್ರದೇಶಗಳೆಂದು ಒಟ್ಟು 3,30,186.93 ಹೆಕ್ಟೇರ್ ಎಂದು ಸರ್ಕಾರದ ಆದೇಶ ಸಂಖ್ಯೆ: ಅಪಜೀ 185 ಎಫ್ ಎಎಫ್ 2011, ದಿನಾಂಕ:05.05.2022ರಲ್ಲಿ ಅಧಿಸೂಚಿಸಲಾಗಿರುತ್ತದೆ. ಆದೇಶದ ಪ್ರತಿ **ಅನುಬಂಧ-1 ರಲ್ಲಿ** ಮತ್ತು ಸದರಿ ಜಮೀನುಗಳ ವಿವರಗಳನ್ನು **ಅನುಬಂಧ-1A ರಲ್ಲಿ ಒದಗಿಸಿದೆ.** |
| ಆ) | ಮೇಲಿನ ಆದೇಶದಂತೆ 'ಪರಿಭಾವಿತ ಅರಣ್ಯ' ವೆಂದು ಪರಿಗಣಿಸಿರುವ ಜಮೀನಿನ ವಿವರ (ತಾಲ್ಲೂಕು, ಗ್ರಾಮ ಸರ್ವೆ ನಂಬರ್ ವಿಸ್ತೀರ್ಣ) ಒದಗಿಸುವುದು; | 'ಪರಿಭಾವಿತ ಅರಣ್ಯ' ವಿವರದ ತಾಲ್ಲೂಕು, ಗ್ರಾಮ ಸರ್ವೆ ನಂಬರ್ ವಿಸ್ತೀರ್ಣದ ಮಾಹಿತಿಯನ್ನು ಈ ಮೇಲಿನ ಕ್ರಮ ಸಂಖ್ಯೆ(ಅ)ರಲ್ಲಿ ಒದಗಿಸಿದೆ. |
| ಇ) | ಪರಿಭಾವಿತ ಅರಣ್ಯವೆಂದು ಯಾವ ಅಂಶಗಳ ಆಧಾರದ ಮೇಲೆ ಘೋಷಣೆ ಮಾಡಲಾಗಿದೆ; | ಸರ್ಕಾರದ ಆದೇಶ ಸಂಖ್ಯೆ: FEE 185 FAF 2011, ದಿನಾಂಕ: 15.05.2014ರ ಮಾನದಂಡಗಳನ್ವಯ ಅರಣ್ಯ ಸ್ವರೂಪವಿರುವ ಪ್ರದೇಶಗಳನ್ನು ಪರಿಭಾವಿತ ಅರಣ್ಯ ಪ್ರದೇಶಗಳೆಂದು ಗುರುತಿಸಲಾಗಿರುತ್ತದೆ.<br>ಸರ್ಕಾರದ ಆದೇಶದ ಪ್ರತಿಯನ್ನು **ಅನುಬಂಧ-2ರಲ್ಲಿ ಒದಗಿಸಿದೆ.** |
| ಈ) | ರಾಜ್ಯ ಸರ್ಕಾರದ ತಜ್ಞರ ಸಮಿತಿ-1 ರ ವರದಿಯ ಅನ್ವಯ 'ಪರಿಭಾವಿತ ಅರಣ್ಯ' ವೆಂದು ಗುರುತಿಸಿ ನಂತರ ಜಿಲ್ಲಾಮಟ್ಟದ ಸಮಿತಿಗಳ ಪುನರ್ ಪರಿಶೀಲನಾ ಸಮಿತಿಯ ವರದಿಯನ್ವಯ ಪರಿಭಾವಿತ ಅರಣ್ಯ ವರ್ಗೀಕರಣದಿಂದ ಹೊರಗಿಡಲ್ಪಟ್ಟ ಜಮೀನುಗಳು ಯಾವುವು; (ತಾಲ್ಲೂಕುವಾರು ಗ್ರಾಮ ಹಾಗೂ ಸರ್ವೆನಂಬರ್‌ವಾರು ವಿವರ ನೀಡುವುದು) | ರಾಜ್ಯ ಸರ್ಕಾರದ ಪುನರ್ ರಚಿತ ತಜ್ಞರ ಸಮಿತಿ-1ರ ವರದಿಯಲ್ಲಿ ಈ ಹಿಂದೆ ಪರಿಭಾವಿತ ಅರಣ್ಯಗಳು ಎಂದು ಗುರುತಿಸಲಾಗಿದ್ದ 9,94,881.11 ಹೆಕ್ಟೇರ್ ಪ್ರದೇಶಗಳಿಂದ ಈ ಕೆಳಗಿನಂತೆ:-<br>1. ಕೂಡುವಿಕೆಯಲ್ಲಿನ ಮತ್ತು ಪರಿವರ್ತನೆಯಲ್ಲಿನ ದೋಷಗಳು: 82,089.96 ಹೆಕ್ಟೇರ್.<br>2. ಸರ್ವೆ ನಂಬರ್‌ಗಳ ಪುನರಾವರ್ತನೆ:27,604.61 ಹೆಕ್ಟೇರ್.<br>3. ಸರ್ವೆ ನಂಬರ್‌ನಲ್ಲಿ ಲಭ್ಯವಿಲ್ಲದ ಸರ್ಕಾರದ ಪ್ರದೇಶಗಳು: 43,357.50 ಹೆಕ್ಟೇರ್.<br>4. ಖಾಸಗಿ ಪಟ್ಟಾ ಜಮೀನು: 38,796.20 ಹೆಕ್ಟೇರ್.<br>5. ಸರ್ವೆ ನಂಬರ್ ಅಸ್ತಿತ್ವದಲ್ಲಿಲ್ಲದ/ ನಮೂನೆ-50 ಮತ್ತು 53 ರಡಿ ಸಾರ್ವಜನಿಕ ಉದ್ದೇಶಕ್ಕಾಗಿ ಮಂಜೂರಾದ ಪ್ರದೇಶಗಳು/ ಪುನರ್ವಸತಿ ಪ್ರದೇಶಗಳು:30,615.20 ಹೆಕ್ಟೇರ್.<br>6. ಮೀಸಲು ಅರಣ್ಯ ಪ್ರದೇಶ:1,35,111.30 ಹೆಕ್ಟೇರ್. |

| | | |
|---|---|---|
| | | 7. ಕೆರೆತೀರ, ಸಾಂಸ್ಥಿಕ, ಶಾಲಾನೆಡುತೋಪು ಇತ್ಯಾದಿಗಳು: 21,583.59 ಹೆಕ್ಟೇರ್<br>8. ಸ್ಟ್ರಿಪ್-ಕಾಲುವೆ ನೆಡುತೋಪು ಮತ್ತು ರಸ್ತೆ ಬದಿ ನೆಡುತೋಪು:27,300.68 ಹೆಕ್ಟೇರ್.<br>9. 2 ಹೆಕ್ಟೇರ್‌ಗಿಂತ ಕಡಿಮೆ ಪ್ರದೇಶ:10,949.67 ಹೆಕ್ಟೇರ್<br>10. ಪ್ರತಿ ಹೆಕ್ಟೇರ್‌ಗೆ 50 ಕ್ಕಿಂತ ಕಡಿಮೆ ಮರಗಳಿರುವ ಪ್ರದೇಶ: 1,62,073.52 ಹೆಕ್ಟೇರ್<br>11. ಇತರೆ ವಿಭಾಗಗಳಿಗೆ / ಇಲಾಖೆಗಳಿಗೆ ವರ್ಗಾಯಿಸಲಾದ ಪ್ರದೇಶಗಳು:21,030.02 ಹೆಕ್ಟೇರ್<br>12. ವಿವಿಧ ಶಾಸನ ಬದ್ಧ ನಿಬಂಧನೆಗಳ ಪ್ರಕಾರ ಅರಣ್ಯ: 1,72,814.66 ಹೆಕ್ಟೇರ್.<br>ಹೀಗೆ ಒಟ್ಟು 7,73,326.91 ಹೆಕ್ಟೇರ್ ಪ್ರದೇಶಗಳನ್ನು ಪ್ರತ್ಯೇಕಿಸಿ ಉಳಿದ 2,21,554.20 ಹೆಕ್ಟೇರ್ ಹಾಗೂ ಹೊಸದಾಗಿ ಪರಿಭಾವಿತ ಅರಣ್ಯ ಪ್ರದೇಶಗಳೆಂದು ಗುರ್ತಿಸಲಾದ 1,08,632.73 ಹೆಕ್ಟೇರ್ ಪ್ರದೇಶಗಳನ್ನು ಸೇರಿಸಿ ಒಟ್ಟು 3,30,186.93 ಹೆಕ್ಟೇರ್ ಪ್ರದೇಶಗಳನ್ನು ಪರಿಭಾವಿತ ಅರಣ್ಯ ಪ್ರದೇಶಗಳೆಂದು ಗುರುತಿಸಿ ಆದೇಶಿಸಲಾಗಿದೆ.<br>ತಾಲ್ಲೂಕುವಾರು ಗ್ರಾಮ ಹಾಗೂ ಸರ್ವೆ ನಂಬರ್ ವಾರು ವಿವರಗಳು ಈ ಮೇಲಿನ ಕ್ರಮ ಸಂಖ್ಯೆ:(ಅ) ಅನುಬಂಧ-1ರಲ್ಲಿ ಒದಗಿಸಿದೆ. |
| ಉ) | ಪರಿಭಾವಿತ ಅರಣ್ಯ ವರ್ಗೀಕರಣದಿಂದ ಹೊರಗಿಡಲ್ಪಟ್ಟ ಜಮೀನನ್ನು ಈ ಹಿಂದಿನ ಸ್ಥಿತಿಯಂತೆ ಕಂದಾಯ ಅಥವಾ ಮಾತ್ರ ಇಲಾಖೆಗೆ ಹಿಂತಿರಿಗಿಸಿರುವುದೇ; (ಆದೇಶದ ಪ್ರತಿಯನ್ನು ಒದಗಿಸುವುದು) | ಪುನರ ರಚಿತ ತಜ್ಞ ಸಮಿತಿ-1ರ ವರದಿಯಲ್ಲಿ ಗುರುತಿಸಲಾಗಿದ್ದ ಒಟ್ಟು 9,94,881.11 ಹೆಕ್ಟೇರ್ ಪ್ರದೇಶಗಳಿಂದ ಪ್ರತ್ಯೇಕಿಸಲಾದ 7,73,326.91 ಹೆಕ್ಟೇರ್ ಪ್ರದೇಶಗಳು, "ಪರಿಭಾವಿತ ಅರಣ್ಯ ಪಟ್ಟಿಗೆ ಸೇರುವ ಮುನ್ನ ಯಾವುದೇ ನಿರ್ದಿಷ್ಟ ಇಲಾಖೆಯ ಆಡಳಿತಾತ್ಮಕ ನಿಯಂತ್ರಣದಲ್ಲಿದ್ದರೆ, ಆಯಾ ಇಲಾಖೆಯ ಸುಪರ್ದಿಯಲ್ಲಿ ಮುಂದುವರೆಯುತ್ತವೆ ಎಂದು ಪರಿಗಣಿಸತಕ್ಕದ್ದು"ಎಂದು ಕಂದಾಯ ಇಲಾಖೆಯು ತನ್ನ ಸುತ್ತೋಲೆ ಸಂಖ್ಯೆ: ಆರ್ ಡಿ/32/ಎಲ್‌ಪಿಜಿ/2022, ದಿನಾಂಕ:28.10.2022ರಲ್ಲಿ ಸ್ಪಷ್ಟೀಕರಿಸಿದೆ. ಸದರಿ ಸುತ್ತೋಲೆಯ ಪ್ರತಿಯನ್ನು **ಅನುಬಂಧ-3ರಲ್ಲಿ ಒದಗಿಸಿದೆ.** |
| ಊ) | ಮೈಸೂರು ಜಿಲ್ಲೆ ಹೆಗ್ಗಡ ದೇವನಕೋಟೆ ಹಾಗೂ ಸರಗೂರು ತಾಲ್ಲೂಕಿನಲ್ಲಿರುವ 'ಪರಿಭಾವಿತ ಅರಣ್ಯ' ಪ್ರದೇಶಗಳು ಯಾವುವು? | ಮೈಸೂರು ಜಿಲ್ಲೆ ಹೆಗ್ಗಡ ದೇವನಕೋಟೆ ಹಾಗೂ ಸರಗೂರು ತಾಲ್ಲೂಕಿನಲ್ಲಿರುವ 'ಪರಿಭಾವಿತ ಅರಣ್ಯ' ಪ್ರದೇಶಗಳ ವಿವರವನ್ನು**ಅನುಬಂಧ-4ರಲ್ಲಿ ಒದಗಿಸಿದೆ.** |

ಸಂಖ್ಯೆ: ಅಪಜೀ 191 ಎಫ್ ಎ ಎಫ್ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ಅನುಬಂಧ - 1

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ರಾಜ್ಯದ ಪರಿಭಾವಿತ ಅರಣ್ಯ ಪ್ರದೇಶಗಳನ್ನು ಗುರುತಿಸಿ ಅಧಿಸೂಚಿಸುವ ಕುರಿತು.

**ಓದಲಾಗಿದೆ :-**

1. ಸರ್ಕಾರದ ಆದೇಶ ಸಂಖ್ಯೆ: FEE 02 FFM 1997, ದಿನಾಂಕ: 10-01-1997.
2. ಸರ್ಕಾರದ ಆದೇಶ ಸಂಖ್ಯೆ: FEE 270 FGL 2002, ದಿನಾಂಕ: 25-09-2002.
3. ಸರ್ಕಾರದ ಆದೇಶ ಸಂಖ್ಯೆ: FEE 185 FAF 2011, ದಿನಾಂಕ: 15-05-2014.

**ಪ್ರಸ್ತಾವನೆ:-**

ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ (ಸಿವಿಲ್) ಸಂಖ್ಯೆ. 202/1995 (ಗೋಧವರ್ಮನ್ ತಿರುಮಲಪಾಡ್ ವಿರುದ್ಧ ಕೇಂದ್ರ ಸರ್ಕಾರ ಮತ್ತು ಇತರರು) ರಲ್ಲಿ ದಿನಾಂಕ:12-12-1996ರ ಆದೇಶದಲ್ಲಿ 'ಅರಣ್ಯ' ಮತ್ತು "ಅರಣ್ಯ ಭೂಮಿಗಳು" ಕುರಿತು ವ್ಯಾಖ್ಯಾನಿಸಿರುತ್ತದೆ ಮತ್ತು ಸದರಿ ತೀರ್ಪಿನಲ್ಲಿ ವ್ಯಾಖ್ಯಾನಿಸಿರುವಂತೆ ಅರಣ್ಯಗಳನ್ನು ಗುರುತಿಸಲು ಒಂದು ತಜ್ಞರ ಸಮಿತಿಯನ್ನು ರಚಿಸಬೇಕೆಂದು ಮತ್ತು ಅಂತಹ ಅರಣ್ಯಗಳ ವಿಸ್ತೀರ್ಣದ ಬಗ್ಗೆ ಮಾನ್ಯ ನ್ಯಾಯಾಲಯದ ಮುಂದೆ ಅಫಿಡವಿಟ್ ವಸ್ತುಸ್ಥಿತಿ ವರದಿ ಸಲ್ಲಿಸಬೇಕೆಂದು ರಾಜ್ಯ ಸರ್ಕಾರಗಳಿಗೆ ಈ ಕೆಳಕಂಡಂತೆ ನಿರ್ದೇಶನ ನೀಡಿರುತ್ತದೆ.

> "it has emerged at the hearing, that there is a misconception in certain quarters about the true scope of the Forest (Conservation) ACT-1980 (for short the Act) and the meaning of the word 'forest' used therein. There is also a resulting misconception about the need of prior approval of the Central Government, as required by section 2 of the Act, in respect of certain activities in the forest area which are more often of a commercial nature. It is necessary to clarify that position.
>
> The Forest Conservation Act, 1980 was enacted with a view to check further deforestation which ultimately results in ecological imbalance; and therefore, the provisions made therein for the conservation of forests and for matters connected therewith, must apply to all forests irrespective of the nature of ownership or classification thereof. The word 'Forest' must be understood according to its dictionary meaning. This description cover all statutorily recognised forests, whether designated as reserved, protected or otherwise for the purpose of section 2(i) of the Forest Conservation Act. The term 'forest land', occurring in section 2, will not only include "forest" as understood in the dictionary sense, but also any area recorded as 'forest' in the Government record irrespective of the ownership. This is how it has to be understood for the purpose of Section 2 of the Act. The provisions enacted in the Forest Conservation Act, 1980 for the conservation of forests and the matters connected therewith must apply clearly to all forests so understood irrespective of the ownership or classification thereof".

ಎಂ. ಕೆ.

...2

The Hon'ble Supreme Court further ordered that - "Each State Government should constitute within one month an Expert Committee to:

(i) identify areas which are forests, 'irrespective' of whether they are so notified, recognised or classified under any law, and irrespective of the ownership of the land of such forest:
(ii) identify areas which were earlier forests but stand degraded, denuded or cleared; and
(iii) identify areas covered by plantation trees belonging to the Government and those belonging to private persons".

Each State Government would constitute a committee comprising of the Principal Chief Conservator of Forests and another senior officer to oversee the compliance of this order and file status reports.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ: 12-12-1996 ರ ತೀರ್ಪಿನಲ್ಲಿ ನಿರ್ದೇಶಿಸಿರುವಂತೆ ಅಧ್ಯಯನ ನಡೆಸಿ ವರದಿ ಸಲ್ಲಿಸಲು ಮೇಲೆ ಓದಲಾದ (1) ರ ಆದೇಶದಲ್ಲಿ ತಜ್ಞರ ಸಮಿತಿ-1 ನ್ನು ರಚಿಸಲಾಗಿದ್ದು, ತಜ್ಞರ ಸಮಿತಿಯು ದಿನಾಂಕ: 02-04-1997 ರಂದು ವರದಿಯನ್ನು ಸಲ್ಲಿಸಿರುತ್ತದೆ. ತಜ್ಞರ ಸಮಿತಿಯು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಸಚಿವ ಸಂಪುಟದ ಅನುಮೋದನೆಯೊಂದಿಗೆ ರಾಜ್ಯ ಸರ್ಕಾರವು ದಿನಾಂಕ: 05-04-1997 ಮತ್ತು 25-09-1997 ಗಳಂದು ಮಾನ್ಯ ನ್ಯಾಯಾಲಯಕ್ಕೆ ಅಫಿಡವಿಟ್ ಸಲ್ಲಿಸಿರುತ್ತದೆ.

ಸದರಿ ಅಫಿಡವಿಟ್‌ನಲ್ಲಿ ಅರಣ್ಯ ಇಲಾಖೆಯ ನಿಯಂತ್ರಣದಲ್ಲಿನ "ಅರಣ್ಯ" ಪ್ರದೇಶಗಳ ಸರ್ವೆ ಮತ್ತು ಗಡಿ ಗುರುತಿಸುವಿಕೆ ಕಾರ್ಯವು ಮುಕ್ತಾಯಗೊಂಡಿದ್ದು, ಅರಣ್ಯ ಎಂದು ಗುರುತಿಸಬೇಕಾದ ಇತರೆ ಹೆಚ್ಚುವರಿ ಪ್ರದೇಶಗಳ ಜಿಲ್ಲಾವಾರು, ತಾಲ್ಲೂಕುವಾರು, ಗ್ರಾಮವಾರು, ಸರ್ವೆ ನಂಬರ್‌ಗಳ ಪ್ರದೇಶಗಳನ್ನು ಗುರುತಿಸಬೇಕಾಗಿರುತ್ತದೆ. ಆದುದರಿಂದ ಹೆಚ್ಚುವರಿ ಅರಣ್ಯ ಪ್ರದೇಶಗಳನ್ನು (ಶಾಸನಬದ್ಧ ಅರಣ್ಯ ಹೊರತುಪಡಿಸಿ) ಗುರುತಿಸಿ ಕ್ರೋಢೀಕರಿಸಲು (ಜಿಲ್ಲಾವಾರು, ತಾಲ್ಲೂಕುವಾರು, ಗ್ರಾಮವಾರು, ಸರ್ವೆ ನಂಬರ್‌ವಾರು) ಒಂದು ವರ್ಷದ ಕಾಲಾವಕಾಶ ನೀಡುವಂತೆ ಮನವಿ ಮಾಡಲಾಗಿರುತ್ತದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಚಿಸಿರುವ ಕೇಂದ್ರ ಅಧಿಕಾರಯುಕ್ತ ಸಮಿತಿಯು ರಾಜ್ಯ ಸರ್ಕಾರವು ಒಂದು ವರ್ಷದಲ್ಲಿ ವಿವರವಾದ ಮಾಹಿತಿಯನ್ನು ಕ್ರೋಢಿಕರಿಸುವ ಪ್ರಕ್ರಿಯೆಯನ್ನು ಮುಕ್ತಾಯಗೊಳಿಸುವುದಾಗಿ ಸಲ್ಲಿಸಿದ ಅಫಿಡವಿಟ್‌ರನ್ವಯ ಯಾವುದೇ ಕ್ರಮ ಕೈಗೊಂಡಿದಿಲ್ಲದಿರುವುದನ್ನು ಗಮನಿಸಿರುತ್ತದೆ. ಸರ್ಕಾರವು ಸಲ್ಲಿಸಿದ ಅಫೀಡವಿಟ್‌ರನ್ವಯ ಕೇಂದ್ರ ಅಧಿಕಾರಯುಕ್ತ ಸಮಿತಿಯು ರಾಜ್ಯದ 46,32,615 ಹೆಕ್ಟೇರ್ ಪ್ರದೇಶವನ್ನು (ಎ) ಸರ್ಕಾರಿ ದಾಖಲೆಗಳಂತೆ ಅಧಿಸೂಚಿತ ಅರಣ್ಯ (ಬಿ) ಪರಿಭಾವಿತ ಅರಣ್ಯ ((ಎ) ನ್ನು ಹೊರತುಪಡಿಸಿ) ವೆಂದು ವರ್ಗೀಕರಿಸಬೇಕೆಂದು ಮತ್ತು ಪರಿಭಾವಿತ ಅರಣ್ಯಗಳನ್ನು ಜಿಲ್ಲಾವಾರು ಮತ್ತು

...3

ಗ್ರಾಮವಾರು ಸರ್ವೆ ನಂಬರ್‌ಗಳೊಂದಿಗೆ ಮರು ವರ್ಗೀಕರಣ ಮಾಡಬೇಕಾಗುತ್ತದೆ ಎಂದು ಗಮನಿಸಿರುತ್ತದೆ. ಪರಿಭಾವಿತ ಅರಣ್ಯವು ಖಾಸಗಿ ಅರಣ್ಯದ ಭಾಗವಾಗಿರಬಹುದೆಂದು ಅಥವಾ ದಟ್ಟ ಮರಗಳುಳ್ಳ ಸರ್ಕಾರಿ ಪ್ರದೇಶವಾಗಿರಬಹುದೆಂದು ಆದರೆ, ಅಧಿಸೂಚಿತ ಅರಣ್ಯವಾಗಿರದ ಪ್ರದೇಶಗಳಾಗಿರಬೇಕೆಂದು ಗಮನಿಸಿರುತ್ತದೆ.

ರಾಜ್ಯ ಸರ್ಕಾರವು ಓದಲಾದ (2) ರ ಆದೇಶದಲ್ಲಿ, ವರದಿಯನ್ನು ಸಲ್ಲಿಸಲು ಪುನರ್‌ರಚಿತ ತಜ್ಞರ ಸಮಿತಿ-1 (REC-1) ಅನ್ನು ರಚಿಸಿತ್ತು. ಸದರಿ ಪುನರ್ ರಚಿತ ತಜ್ಞರ ಸಮಿತಿ-1 ಒಟ್ಟು 9,94,881.11 ಹೆಕ್ಟೇರ್‌ಗಳನ್ನು ಡೀಮ್ಡ್ ಫಾರೆಸ್ಟ್ ಎಂದು ಗುರುತಿಸಿರುತ್ತದೆ. ಆದರೆ, ಪುನರ್ ರಚಿತ ತಜ್ಞರ ಸಮಿತಿ-1 ಸಲ್ಲಿಸಿದ ವರದಿಯಲ್ಲಿ ಶಾಸನಬದ್ಧ ಅರಣ್ಯಗಳನ್ನು ಪರಿಭಾವಿತ ಅರಣ್ಯಗಳೆಂದು ತಪ್ಪಾಗಿ ವರ್ಗೀಕರಿಸಿರುವುದರಿಂದ ಮತ್ತು ನಿಘಂಟು ವ್ಯಾಖ್ಯಾನದಂತೆ ಪರಿಭಾವಿತ ಅರಣ್ಯ ಪ್ರದೇಶಗಳನ್ನು ಯಾವುದೇ ಪೂರ್ವ ನಿರ್ಧಾರಿತ ಮಾನದಂಡಗಳನ್ನು ಅಳವಡಿಸದೇ ಗುರುತಿಸಿರುವುದರಿಂದ ಪುನರ್‌ರಚಿತ ತಜ್ಞರ ಸಮಿತಿಯು ಗುರುತಿಸಿದ ಪ್ರದೇಶಗಳನ್ನು ಮರು ಪರಿಶೀಲಿಸಲು ನಿರ್ಧರಿಸಿ ಕಂದಾಯ ಮತ್ತು ಅರಣ್ಯಾಧಿಕಾರನ್ನೊಳಗೊಂಡ ಜಿಲ್ಲಾ, ವಿಭಾಗೀಯ ಮತ್ತು ರಾಜ್ಯ ಮಟ್ಟದ ಸಮಿತಿಗಳನ್ನು ರಚಿಸಿ ಓದಲಾದ (3) ರಲ್ಲಿ ಆದೇಶ ಹೊರಡಿಸಲಾಗಿರುತ್ತದೆ.

ಮುಂದುವರೆದು, ಮೇಲೆ ಓದಲಾದ (3) ರ ಆದೇಶದಲ್ಲಿ "The Committees will verify/review the areas included as 'Deemed Forests' in the report of Revised Expert Committee-I. The total extent of deemed forests should be categorised into a) Statutory forests b) recorded as 'forest' in Government records c) areas which are 'forests' as per dictionary definition based on field verification as per the criteria and methodology approved at Para (11) of Preamble. The Committees will also consider those areas not included in the Revised Expert Committee report as deemed forest, but eligible for inclusion based on Government records or approved field criteria" ಎಂದು ಆದೇಶಿಸಿರುತ್ತದೆ.

ಮೇಲೆ ಓದಲಾದ (3) ರ ಆದೇಶದಲ್ಲಿ ರಚಿಸಲಾದ ಜಿಲ್ಲಾ ಸಮಿತಿಗಳು ಪುನರ್‌ರಚಿತ ತಜ್ಞರ ಸಮಿತಿಯ -1ರ ವರದಿಯಲ್ಲಿನ 9,94,881.11 ಹೆಕ್ಟೇರ್ ಪ್ರದೇಶಗಳನ್ನು ಆದೇಶದಲ್ಲಿ ನಿರ್ದಿಷ್ಟಪಡಿಸಿರುವ ಮಾನದಂಡಗಳನ್ವಯ ಅರಣ್ಯ ಗುಣಲಕ್ಷಣಗಳನ್ನು ಹೊಂದಿಲ್ಲದಿರುವುದು ಮತ್ತು 2 ಹೆಕ್ಟೇರ್ ಪ್ರದೇಶಗಳಿಗಿಂತ ಕಡಿಮೆ ಇರುವ ಪ್ರದೇಶ, ಇತ್ಯಾದಿಗಳನ್ನು ಪರಿಭಾವಿತ ಅರಣ್ಯವೆಂದು ಪರಿಗಣಿಸಿರುವುದನ್ನು ಪರಿಶೀಲಿಸಿ ಈ ಕೆಳಗಿನ ಕಾರಣಗಳೊಂದಿಗೆ ಗುರುತಿಸಿರುತ್ತದೆ.

| ಕ್ರಮ ಸಂಖ್ಯೆ | ಕಾರಣಗಳು | ವಿಸ್ತೀರ್ಣ (ಹೆಕ್ಟೇರ್ ಗಳಲ್ಲಿ) |
|---|---|---|
| 1. | ಕೂಡುವಿಕೆಯಲ್ಲಿನ ಮತ್ತು ಪರಿವರ್ತನೆಯಲ್ಲಿನ ದೋಷಗಳು (Totalling & Conversion Errors) | 82,089.96 |

| | | |
|---|---|---|
| 2. | ಸರ್ವೆ ನಂಬರ್‌ಗಳ ಪುನರಾವರ್ತನೆ (Suvey numbers repetition) | 27,604.61 |
| 3. | ಸರ್ವೆ ನಂಬರ್‌ನಲ್ಲಿ ಲಭ್ಯವಿಲ್ಲದ ಸರ್ಕಾರದ ಪ್ರದೇಶಗಳು (Government land not available in survey number) | 43,357.50 |
| 4. | ಖಾಸಗಿ ಪಟ್ಟಾ (Private Patta) | 38,796.20 |
| 5. | ಸರ್ವೆ ನಂಬರ್ ಅಸ್ತಿತ್ವದಲ್ಲಿಲ್ಲದ/ನಮೂನೆ-50 ಮತ್ತು 53ರಡಿ ಸಾರ್ವಜನಿಕ ಉದ್ದೇಶಕ್ಕಾಗಿ ಮಂಜೂರಾದ ಪ್ರದೇಶಗಳು/ಪುನರ್ವಸತಿ ಪ್ರದೇಶಗಳು (Survey number not present/form 50 & 53 grants public community use/ rehabilitation area) | 30,615.20 |
| 6. | ಮೀಸಲು ಅರಣ್ಯ ಪ್ರದೇಶ (Reserve forest area) | 1,35,111.30 |
| 7. | ಕೆರೆತೀರ, ಸಾಂಸ್ಥಿಕ, ಶಾಲಾ ನೆಡುತೋಪು ಇತ್ಯಾದಿಗಳು, (Tank fore shore, institutional, school plantation etc.,) | 21,583.59 |
| 8. | ಸ್ಟ್ರಿಪ್ – ಕಾಲುವೆ ನೆಡುತೋಪು ಮತ್ತು ರಸ್ತೆ ಬದಿ ನೆಡುತೋಪು (Strip- canal plantation and road side plantation) | 27,300.68 |
| 9. | 2 ಹೆಕ್ಟೇರ್‌ಗಿಂತ ಕಡಿಮೆ ಪ್ರದೇಶ (Less than 2 hectares) | 10,949.67 |
| 10. | ಪ್ರತಿ ಹೆಕ್ಟೇರಿಗೆ 50 ಕ್ಕಿಂತ ಕಡಿಮೆ ಮರಗಳಿರುವ ಪ್ರದೇಶ (areas less than 50 trees per hectare) | 1,62,073.52 |
| 11. | ಇತರೆ ವಿಭಾಗಗಳಿಗೆ /ಇಲಾಖೆಗಳಿಗೆ ವರ್ಗಾಯಿಸಲಾದ ಪ್ರದೇಶಗಳು (Area transferred to other divisions/Departments) | 21,030.02 |
| 12. | ವಿವಿಧ ಶಾಸನಬದ್ಧ ನಿಬಂಧನೆಗಳ ಪ್ರಕಾರ ಅರಣ್ಯ (Forest as per various statutory provisions) | 1,72,814.66 |
| | **ಒಟ್ಟು** | **7,73,326.91** |

ಮೇಲೆ ಓದಲಾದ (3) ರ ಆದೇಶದಲ್ಲಿ ನೀಡಲಾಗಿರುವ ಮಾನದಂಡಗಳಂತೆ ಜಿಲ್ಲಾ ಮಟ್ಟದ ಸಮಿತಿಗಳು ಪುನರ್‌ರಚಿತ ತಜ್ಞರ ಸಮಿತಿ -1 ರ ವರದಿಯಲ್ಲಿನ 9,94,881.11 ಹೆಕ್ಟೇರ್ ಪ್ರದೇಶಗಳನ್ನು ಪರಿಶೀಲಿಸಿ, ಕೂಡುವುದರಲ್ಲಿ (Totalling Errors), ಪರಿವರ್ತನೆಯಲ್ಲಿ (Conversion Errors), ವರ್ಗೀಕರಣದಲ್ಲಿ (Categorisation Errors) ಸರ್ವೆ ನಂಬರ್ (Survey Number Errors) ದೋಷಗಳಿರುವ ಪ್ರದೇಶಗಳು ಖಾಸಗಿ ಪಟ್ಟಾ, ಅಸ್ತಿತ್ವದಲ್ಲಿಲ್ಲದ ಸರ್ವೆ ನಂಬರ್, ಮೀಸಲು ಅರಣ್ಯ ಪ್ರದೇಶ, ಕೆರೆತೀರ, ಸಾಂಸ್ಥಿಕ, ಶಾಲಾ ನೆಡುತೋಪು ಇತ್ಯಾದಿಗಳು, ಸ್ಟ್ರಿಪ್ – ಕಾಲುವೆ ನೆಡುತೋಪು ಮತ್ತು ರಸ್ತೆ ಬದಿ ನೆಡುತೋಪು, 2 ಹೆಕ್ಟೇರ್‌ಗಿಂತ ಕಡಿಮೆ ಪ್ರದೇಶ, ಪ್ರತಿ ಹೆಕ್ಟೇರಿಗೆ 50 ಕ್ಕಿಂತ ಕಡಿಮೆ ಮರಗಳಿರುವ, ಇತರೆ ವಿಭಾಗಗಳಿಗೆ/ಇಲಾಖೆಗಳಿಗೆ ವರ್ಗಾಯಿಸಲಾದ ಪ್ರದೇಶಗಳು, ವಿವಿಧ ಶಾಸನಬದ್ಧ ನಿಬಂಧನೆಗಳ ಪ್ರಕಾರ ಅರಣ್ಯ ಮತ್ತು ನಿರ್ದಿಷ್ಟಪಡಿಸಿದ ಕ್ಷೇತ್ರದ ಮಾನದಂಡಗಳಿಗೆ ಅನುಗುಣವಾಗಿರದ ಪ್ರದೇಶಗಳನ್ನು ಪ್ರತ್ಯೇಕಿಸಿ,

...5

2,21,554.20 ಹೆಕ್ಟೇರ್ ಪ್ರದೇಶಗಳನ್ನು ಪರಿಭಾವಿತ ಅರಣ್ಯ ಪ್ರದೇಶಗಳೆಂದು ಗುರುತಿಸಿರುತ್ತವೆ. ಅಲ್ಲದೇ ಮಾನದಂಡಗಳಿಗೆ ಅನುಗುಣವಾಗಿರುವ, ಆದರೆ ಪುನರ್‌ರಚಿತ ತಜ್ಞರ ಸಮಿತಿ-1 ರಲ್ಲಿ ಸೇರ್ಪಡೆಯಾಗದೇ ಇರುವ 1,08,632.73 ಹೆಕ್ಟೇರ್ ಪ್ರದೇಶಗಳನ್ನು ಹೆಚ್ಚುವರಿಯಾಗಿ ಗುರುತಿಸಿ ಪರಿಭಾವಿತ ಅರಣ್ಯ ಪ್ರದೇಶಗಳೆಂದು ಸೇರ್ಪಡಿಸಲು ಸಲ್ಲಿಸಿರುತ್ತವೆ.

ಈ ರೀತಿ ಪುನರ್‌ರಚಿತ ತಜ್ಞರ ಸಮಿತಿ-1 ಗುರುತಿಸಿದ 9,94,881.11 ಹೆಕ್ಟೇರ್ ಪ್ರದೇಶಗಳನ್ನು ನಿರ್ದಿಷ್ಟಪಡಿಸಿದ ಮಾನದಂಡಗಳನ್ವಯ ಪರಿಶೀಲಿಸಿ ಗುರುತಿಸಿರುವ 2,21,554.20 ಹೆಕ್ಟೇರ್ ಪ್ರದೇಶಗಳನ್ನು ಮತ್ತು ಪುನರ್‌ರಚಿತ ತಜ್ಞರ ಸಮಿತಿ-1 ರಲ್ಲಿ ಸೇರ್ಪಡೆಯಾಗದೇ ಇರುವ ಆದರೆ ಕ್ಷೇತ್ರಿಯ ಮಾನದಂಡಗಳಿಗೆ ಅನುಗುಣವಾಗಿರುವ 1,08,632.73 ಹೆಕ್ಟೇರ್ ಪ್ರದೇಶಗಳನ್ನು ಒಟ್ಟುಗೂಡಿಸಿ ಒಟ್ಟಾರೆ 3,30,186.93 ಹೆಕ್ಟೇರ್ (2,21,554.20+1,08,632.73) ಹೆಕ್ಟೇರ್ ಪ್ರದೇಶಗಳನ್ನು ಪರಿಭಾವಿತ ಅರಣ್ಯಗಳೆಂದು ಜಿಲ್ಲಾಮಟ್ಟದ ಸಮಿತಿಗಳು ಗುರುತಿಸಿ ಸಲ್ಲಿಸಿದ ವಿವರಗಳನ್ನು ಸಚಿವ ಸಂಪುಟದ ಅನುಮೋದನೆಯೊಂದಿಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಅಫಿಡವಿಟ್ ಸಲ್ಲಿಸಲಾಗಿರುತ್ತದೆ.

ಮೇಲೆ ವಿವರಿಸಿದಂತೆ ಪರಿಭಾವಿತ ಅರಣ್ಯವೆಂದು ಗುರುತಿಸಿ ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಲಾಗಿರುವ ಪ್ರದೇಶಗಳನ್ನು ಅರಣ್ಯೇತರ ಉದ್ದೇಶಗಳಿಗೆ ಬಳಕೆಯಾಗದಂತೆ ಸಂರಕ್ಷಿಸಿ ಅಭಿವೃದ್ಧಿಪಡಿಸುವುದು ಅವಶ್ಯಕವಾಗಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 185 ಎಫ್‌ಎಎಫ್ 2011,**
**ಬೆಂಗಳೂರು, ದಿನಾಂಕ: 05-05-2022**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ನಿರ್ದಿಷ್ಟಪಡಿಸಿದ ಕ್ಷೇತ್ರಿಯ ಮಾನದಂಡಗಳನ್ವಯ ಜಿಲ್ಲಾಮಟ್ಟದ ಸಮಿತಿಗಳು ಗುರುತಿಸಿ, ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಲಾಗಿರುವ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ 3,30,186.93 ಹೆಕ್ಟೇರ್ ಪ್ರದೇಶಗಳನ್ನು ಸಂರಕ್ಷಿಸಿ ಅಭಿವೃದ್ಧಿಗೊಳಿಸುವ ದೃಷ್ಟಿಯಿಂದ **"ಪರಿಭಾವಿತ ಅರಣ್ಯ ಪ್ರದೇಶಗಳು (Deemed Forests)"** ಎಂದು ಅಧಿಸೂಚಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಎಂ. ಸತ್ಯವತಿ 05/05/2022
**(ಎಂ. ಸತ್ಯವತಿ)**
ಸರ್ಕಾರದ ಉಪ ಕಾರ್ಯದರ್ಶಿ
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ಇವರಿಗೆ:**

1. ಪ್ರಧಾನ ಮಹಾಲೇಖಪಾಲರು (ಜಿ ಮತ್ತು ಎಸ್ ಎಸ್ ಎ)/ಇ ಮತ್ತು ಆರ್ ಎಸ್ ಎ)/ (ಎ ಮತ್ತು ಇ) ಕರ್ನಾಟಕ, ಬೆಂಗಳೂರು-560 001.

